# ರಾಯಚೂರು ಪ್ರದೇಶದ ಸಾಮಾಜಿಕ ಚಳವಳಿಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಚರಿತ್ರೆ ವಿಭಾಗಕ್ಕೆ
ಎಂ. ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ

ಸಂಶೋಧಕರು
**ಶಶಿಕಾಂತ ಅಮಲಪ್ಪ ಬಿಲ್ಲವ**

ಮಾರ್ಗದರ್ಶಕರು
ಡಾ. ಟಿ. ವಿಜಯ್ ಪೂಣಚ್ಚ
ಪ್ರಾಧ್ಯಾಪಕರು, ಚರಿತ್ರೆ ವಿಭಾಗ



ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಜೂನ್ ೨೦೦೨

142

# ರಾಯಚೂರು ಪ್ರದೇಶದ ಸಾಮಾಜಿಕ ಚಳವಳಿಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಚರಿತ್ರೆ ವಿಭಾಗಕ್ಕೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

**ಶಶಿಕಾಂತ ಅಮಲಪ್ಪ ಬಿಲ್ಲವ**

ಮಾರ್ಗದರ್ಶಕರು
**ಡಾ. ಟಿ.ವಿಜಯ್ ಪೂಣಚ್ಚ**
ಪ್ರಾಧ್ಯಾಪಕರು, ಚರಿತ್ರೆ ವಿಭಾಗ



ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಜೂನ್ ೨೦೦೭

## ಮಾರ್ಗದರ್ಶಕರ ಪ್ರಮಾಣಪತ್ರ

ರಾಯಚೂರು ಪ್ರದೇಶದ ಸಾಮಾಜಿಕ ಚಳವಳಿಗಳು ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಶಶಿಕಾಂತ ಅಮಲಪ್ಪ ಬಿಲ್ಲವ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಬಿ. ವಿಜಯ್ ಪೂಣಚ್ಚ
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 30.07.07

# ಪ್ರಮಾಣ ಪತ್ರ

ರಾಯಚೂರು ಪ್ರದೇಶದ ಸಾಮಾಜಿಕ ಚಳವಳಿಗಳು ಎಂಬ ನಿಬಂಧವನ್ನು ಡಾ. ಟಿ.ವಿಜಯ್ ಪೂಣಚ್ಚ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಶಶಿಕಾಂತ ಅಮಲಪ್ಪ ಬಿಲ್ಲವ
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 30.07.2007.

# ಪರಿವಿಡಿ

## ನಕ್ಷೆಗಳು

ಇತ್ತೀಚಿನ ದಶಕಗಳಲ್ಲಿ ಸಾಮಾಜಿಕ ಚಳವಳಿಗಳ ಪರಿಣಾಮಗಳು ಭಾರತದಲ್ಲಲ್ಲದೆ ಜಗತ್ತಿನ ಎಲ್ಲ ಕಡೆಗಳಲ್ಲೂ ಕಾಣಬಹುದು. ಸಾಂಪ್ರದಾಯಿಕ ಸಾಮಾಜಿಕ ಚಳವಳಿಗಿಂತ ಭಿನ್ನಹಾದಿಯನ್ನು ತಳೆದಿರುವ ಈ ಚಳವಳಿಗಳು ಬಹುತೇಕವಾಗಿ ವಸಾಹತೋತ್ತರ ಪ್ರದೇಶಗಳಲ್ಲಿ ವಿಭಿನ್ನ ಛಾಯೆಯನ್ನು ಬಿತ್ತಿರುವುದನ್ನು ನಾವು ಕಾಣಬಹುದು. ಕರ್ನಾಟಕದ ವ್ಯಾಪ್ತಿಯಲ್ಲಿ ಈ ಚಳವಳಿಗಳ ಬಗ್ಗೆ ಅಲ್ಲಲ್ಲಿ ಮಾಹಿತಿಗಳಿವೆ. ಸೈದ್ಧಾಂತಿಕವಾಗಿ ಹೈದರಾಬಾದ್ ಕರ್ನಾಟಕದಲ್ಲಿ ತೀರ ಹಿಂದುಳಿದ ಪ್ರದೇಶವಾದ ರಾಯಚೂರಿನಲ್ಲಿ ಈ ಬಗೆಯ ಚಳವಳಿಗಳ ಅಧ್ಯಯನದ ಜರೂರು ಬಹಳಷ್ಟಿದೆ. ಬಡತನ, ಅನಕ್ಷರತೆ, ನಿರುದ್ಯೋಗ, ಜಾತಿ ಪ್ರಾಬಲ್ಯ ಮತ್ತು ಜಮೀನ್ದಾರಿ ಪದ್ಧತಿಗಳು ಇಂದಿಗೂ ಜಾರಿಯಲ್ಲಿರುವ ಈ ಪ್ರದೇಶದಲ್ಲಿ ಚಳವಳಿಗಳ ವಿವಿಧ ಮಾದರಿಗಳು ಪ್ರಜಾಪ್ರಭುತ್ವ ವ್ಯವಸ್ಥೆಯ ಈ ಹಂತದಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಕೆಲವೊಂದು ಚಳವಳಿಗಳು ಈಗಲೂ ಜೀವಂತವಾಗಿವೆ. ಈ ಚಳವಳಿಗಳ ಹುಟ್ಟು, ಬೆಳವಣಿಗೆ ಮತ್ತು ಸವಾಲುಗಳನ್ನು ಪ್ರಸ್ತುತ ಅಧ್ಯಯನದಲ್ಲಿ ದಾಖಲು ಮಾಡಲು ಪ್ರಯತ್ನಿಸಲಾಗಿದೆ. ಹಾಗೆ ಇವು ಬೀರಿರುವ ವಿವಿಧ ಬಗೆಯ ಪರಿಣಾಮಗಳನ್ನು ಪ್ರಸ್ತುತ ಸಂದರ್ಭದಲ್ಲಿ ಅಧ್ಯಯನ ಮಾಡಲಾಗಿದೆ. ಹೈದ್ರಾಬಾದ್ ಕರ್ನಾಟಕ ಪ್ರದೇಶದ ಬಹಳ ಹಿಂದುಳಿದಿರುವ ಜಿಲ್ಲೆ ರಾಯಚೂರು. ಡಾ.ಡಿ.ಎಂ. ನಂಜುಂಡಪ್ಪ ವರದಿಯ ಪ್ರಕಾರ ರಾಯಚೂರು ಪ್ರದೇಶವು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ತೀರಾ ಹಿಂದುಳಿದ ಪ್ರದೇಶವಾಗಿದೆ. ಇತ್ತೀಚಿನ ದಿನಗಳಲ್ಲಿ ಹಿಂದುಳಿದಿರುವಿಕೆಯಿಂದಾಗಿ ರಾಯಚೂರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದೆ. ಇದು ವಿವಿಧ ಬಗೆಯ ಬಂಡಾಯದ ಆಶಯಗಳಿಗೆ ಕಾರಣವಾಗಿದೆ. ಹೀಗಾಗಿ ಜಿಲ್ಲೆಯಲ್ಲಿ ರೈತ ಚಳವಳಿ, ದಲಿತ ಚಳವಳಿ, ಮಾದಿಗ ಚಳವಳಿ, ಬೀದಿನಾಟಕ ಚಳವಳಿ, ಸಮೂಹ ಚಳವಳಿ, ಕಾರ್ಮಿಕ ಚಳವಳಿ ಮತ್ತು ಸಾಕ್ಷರತೆ ಚಳವಳಿಗಳು ಹುಟ್ಟಿಕೊಂಡವು. ಹೀಗಾಗಿ ಈ ಚಳವಳಿಗಳು ಬೀರಿದ ಪ್ರಭಾವ ಚಳವಳಿಯ ಹುಟ್ಟು, ಬೆಳವಣಿಗೆ ಹಾಗೂ ಚಳವಳಿಯ ಪರಿಣಾಮ ಕುರಿತು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಿ ವಿಶ್ಲೇಷಿಸುವ ಒಂದು ಸಣ್ಣ ಪ್ರಯತ್ನ ಇಲ್ಲಿನದು.

## ಐತಿಹಾಸಿಕ ಹಿನ್ನೆಲೆ

ಈ ಜಿಲ್ಲೆಯ ಐತಿಹಾಸಿಕ ಹಿನ್ನೆಲೆಯೂ ಕ್ರಿ.ಪೂ.೨೦೦೦ ವರ್ಷಗಳಷ್ಟು ಪ್ರಾಚೀನವಾಗಿದ್ದು, ಹಳೆಯ ಶಿಲಾಯುಗದ ಸಂಸ್ಕೃತಿಯಿಂದ ಪ್ರಾರಂಭವಾಗಿ ಕರ್ನಾಟಕದ ಎಲ್ಲ ಪ್ರಮುಖ ರಾಜ ಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ. ಬ್ರಿಟಿಷರ ಅಧಿಕಾರದ ವಿರುದ್ಧ ಹಾಗೂ ಹೈದರಾಬಾದ್ ನಿಜಾಮನ ದಬ್ಬಾಳಿಕೆಯ ಸರಕಾರದ ವಿರುದ್ಧ ನಡೆದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ರಾಯಚೂರು

ಮುಖ್ಯಪಾತ್ರವನ್ನು ವಹಿಸಿತ್ತು. ಜಿಲ್ಲೆಯ ಅನೇಕ ಭಾಗಗಳಲ್ಲಿ ದೊರೆತ ಶಿಲಾಶಾಸನಗಳು, ಅಳಿದುಳಿದು ನಿಂತಿರುವ ಕೋಟೆ ಕೊತ್ತಲಗಳು ಹಾಗೂ ದೇವಸ್ಥಾನಗಳು ಈ ಜಿಲ್ಲೆಯ ಇತಿಹಾಸ ರಚನೆಗೆ ಮುಖ್ಯವಾದ ಆಕರಗಳಾಗಿವೆ.

ರಾಯಚೂರು ಜಿಲ್ಲೆ ಕೃಷ್ಣಾ ತುಂಗೆಯರ ಮಂಗಳ ಅಂಗಳ. ಎಡೆದೊರೆ ನಾಡು ಹಾಗೂ ದೋಆಬ್ ಎಂದು ಪ್ರತೀತಿ ಪಡೆದ ಪ್ರದೇಶ. ದೋಆಬ್ ಎಂದರೆ ಎರಡು ನದಿಗಳ ನಡುವಿನ ಪ್ರದೇಶ. ಈ ಜಿಲ್ಲೆಯು ಕರ್ನಾಟಕದ ಈಶಾನ್ಯ ಭಾಗದ ಉತ್ತರ ತಪ್ಪಲು ಪ್ರದೇಶದಲ್ಲಿ ನೆಲೆಸಿದೆ. ಬಂಡೆಗಲ್ಲುಗಳ ಪರ್ವತಗಳಿಂದ, ಗಿಡಮರಗಳಿಲ್ಲದ ಬಯಲು ಭೂಮಿಯಿಂದ ಒಣಹವೆ ಹಾಗೂ ಕಪ್ಪು ಮಣ್ಣಿನಿಂದ ಕೂಡಿದ ಪ್ರದೇಶವಾಗಿದೆ. ಸಮುದ್ರ ಪಾತಳಿಯಿಂದ ಇದರ ಸಾಮಾನ್ಯವಾದ ಎತ್ತರವು ೧೩೧೧ ಅಡಿ ಇದೆ. ಈ ಜಿಲ್ಲೆಯು ಉತ್ತರದಲ್ಲಿ ಗುಲ್ಬರ್ಗಾ, ಪಶ್ಚಿಮದಲ್ಲಿ ಬಿಜಾಪುರ ಹಾಗೂ ಧಾರವಾಡ, ಪೂರ್ವದಲ್ಲಿ ಆಂಧ್ರ ಪ್ರದೇಶದ ಮೆಹಬೂಬನಗರ ಜಿಲ್ಲೆ ಹಾಗೂ ದಕ್ಷಿಣದಲ್ಲಿ ಆಂಧ್ರದ ಕರ್ನೂಲು ಜಿಲ್ಲೆ ಮತ್ತು ಬಳ್ಳಾರಿ ಜಿಲ್ಲೆಗಳಿಂದ ಆವೃತ್ತವಾಗಿದೆ. ಕೃಷ್ಣಾ ನದಿಯು ಈ ಜಿಲ್ಲೆಯ ಉತ್ತರ ಹಾಗೂ ತುಂಗಭದ್ರಾ ನದಿಯು ದಕ್ಷಿಣ ಮೇರೆಗಳಾಗಿವೆ (ಹೊರಕೇರಿ ಮತ್ತು ಸೊಪ್ಪಿಮಠ, ೨೦೦೫: ೧).

ಭಾರತದ ಸರಕಾರದ ಕೇಂದ್ರ ಅಂಕಿಸಂಖ್ಯೆಗಳ ಪ್ರಕಾರ ರಾಯಚೂರು ಜಿಲ್ಲೆಯ ಭೌಗೋಳಿಕ ವಿಸ್ತಾರವು ೧೪,೦೧೩ ಚದರ ಕಿ.ಮೀ. ಅಂದರೆ, ೫೪೧೦ ಚದರ ಮೈಲುಗಳಾಗಿವೆ. ಕರ್ನಾಟಕ ರಾಜ್ಯದ ಜಿಲ್ಲೆಗಳಲ್ಲಿ ಭೂವಿಸ್ತಾರದಲ್ಲಿ ರಾಯಚೂರು ಜಿಲ್ಲೆಯು ಮೂರನೆಯ ಸ್ಥಾನವನ್ನು ಹಾಗೂ ಜನಸಂಖ್ಯೆಯಲ್ಲಿ ಹತ್ತನೆಯ ಸ್ಥಾನವನ್ನು ಹೊಂದಿದೆ.

೧೯೦೫ರವರೆಗೆ ರಾಯಚೂರು ಪ್ರದೇಶವು ರಾಯಚೂರು ಹಾಗೂ ಲಿಂಗಸೂಗುರು ಜಿಲ್ಲೆಗಳಲ್ಲಿ ವಿಂಗಡಿತವಾಗಿತ್ತು. ಆಗ ರಾಯಚೂರು ಜಿಲ್ಲೆಯು ಯಾದಗಿರಿ, ದೇವದುರ್ಗ, ಮಾನ್ವಿ, ಅಲಂಪುರ ಮತ್ತು ಗದ್ವಾಲ ತಾಲೂಕುಗಳನ್ನು ಹಾಗೂ ಲಿಂಗಸೂಗೂರು ಜಿಲ್ಲೆಯು ಲಿಂಗಸೂಗುರು, ಕುಷ್ಟಗಿ, ಗಂಗಾವತಿ, ಸಿಂಧನೂರು, ಶಹಾಪುರ ಮತ್ತು ಶೋರಾಪುರ (ಸುರಪುರ) ತಾಲೂಕುಗಳನ್ನು ಒಳಗೊಂಡಿತ್ತು. ಈಗ ಈ ಜಿಲ್ಲೆಯ ತಾಲೂಕುಗಳಾಗಿರುವ ಕೊಪ್ಪಳ ಮತ್ತು ಯಲಬುರ್ಗಾ ತಾಲೂಕುಗಳು ಆಗ ಹೈದಾರಾಬಾದ್ ನಿಜಾಮರ ಪ್ರಧಾನ ಮಂತ್ರಿಗಳಾಗಿದ್ದ ಸರ್ ಸಾಲಾರ್‌ಜಂಗ್ ಅವರ ಜಹಗೀರಾಗಿದ್ದವು. ೧೯೦೫ರಲ್ಲಿ ಲಿಂಗಸೂಗೂರು ಜಿಲ್ಲೆಯನ್ನು ರದ್ದುಪಡಿಸಿ ರಾಯಚೂರು ಜಿಲ್ಲೆಯಲ್ಲಿ ಸೇರಿಸಲಾಗಿತ್ತು (ಹೊರಕೇರಿ ಮತ್ತು ಸೊಪ್ಪಿಮಠ, ೨೦೦೫: ೨).

ರಾಯಚೂರಿಗೆ ಮೊದಲು ರಾಚವೂರ, ಪರ್ಮನರಾಚೂರ ಮತ್ತು ರಾಚನೂರು ಎಂಬ ಹೆಸರಿತ್ತೆಂದು ಹೊಯ್ಸಳರ ಕಾಲದ ಕೆಲವು ಶಾಸನಗಳಿಂದ ತಿಳಿದುಬರುತ್ತದೆ. ಬೇಲೂರು ತಾಲೂಕಿನ ೧೧೬೧ನೇ ಇಸ್ವಿಗೆ ಹಾಗೂ ಒಂದನೇ ನರಸಿಂಹನ ಆಳ್ವಿಕೆಗೆ ಸಂಬಂಧಿಸಿದ ಹುಲಿಕೆರೆ ಶಾಸನದಲ್ಲಿ ಹೊಯ್ಸಳ ವಿಷ್ಣುವರ್ಧನ ದೊರೆಯು ಗೆದ್ದುಕೊಂಡ ಸ್ಥಳಗಳಲ್ಲಿ 'ರಾಚವೂರು' ಒಂದಾಗಿತ್ತೆಂದು ತಿಳಿಸಲಾಗಿದೆ.

# ಕರ್ನಾಟಕದ ನಕ್ಷೆ




ಆಕರ ಸ್ಫೂರ್ತಿ : ಅನಂತರಾಮರಾವ್ ಕೆ., ಸುವರ್ಣ ಕರ್ನಾಟಕ ದರ್ಶನ (೫೦ ಸಂವತ್ಸರಗಳು), ವಿದ್ಯಾ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೬, ಪು.೬೫

## ನೂತನ ಕರ್ನಾಟಕದ ನಕ್ಷೆ




ಆಕರ ಸ್ಫೂರ್ತಿ : ಅನಂತರಾಮರಾವ್ ಕೆ., ಸುವರ್ಣ ಕರ್ನಾಟಕ ದರ್ಶನ (೫೦ ಸಂವತ್ಸರಗಳು), ವಿದ್ಯಾ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೬, ಪು.೬೫

## ರಾಯಚೂರು ಜಿಲ್ಲೆ ನಕ್ಷೆ

## ರಾಯಚೂರು ಪ್ರದೇಶದ ಸಾಮಾಜಿಕ ಚಳವಳಿಗಳು




ಆಕರ ಸ್ಪೂರ್ತಿ : ತುಕಾರಾಂ ಎಸ್. ಮತ್ತು ರಾಜು ಬಿ., ಸಾಕ್ಷರತಾ ದಾರಿಯ ಸಾವಿರ ಹೆಜ್ಜೆ (ಕರ್ನಾಟಕ ರಾಜ್ಯ ಸಾಕ್ಷರತಾ ಆಂದೋಲನದ ದಶಕದ ಸಾಧನೆಗಳು), ನಿರ್ದೇಶಕರು, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು, ೨೦೦೦, ಪು.೪೩

## ನೂತನ ಕೊಪ್ಪಳ ಜಿಲ್ಲೆ




**ಆಕರ ಸ್ಫೂರ್ತಿ :** ಅನಂತರಾಮರಾವ್ ಕೆ., ಸುವರ್ಣ ಕರ್ನಾಟಕ ದರ್ಶನ (೫೦ ಸಂವತ್ಸರಗಳು), ವಿದ್ಯಾ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೬, ಪು.೭೦

## ನೂತನ ರಾಯಚೂರು ಜಿಲ್ಲೆ




ಆಕರ ಸ್ಫೂರ್ತಿ : ಅನಂತರಾಮರಾವ್ ಕೆ., ಸುವರ್ಣ ಕರ್ನಾಟಕ ದರ್ಶನ (೫೦ ಸಂವತ್ಸರಗಳು), ವಿದ್ಯಾ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೬, ಪು.೭೮

ಈ ಐತಿಹಾಸಿಕ ಹೆಸರು 'ರಾಚೂರು' ಅನೇಕ ಬದಲಾವಣೆಗಳನ್ನು ಹೊಂದಿ, ರಾ ಮತ್ತು ಚೂರುಗಳ ಮಧ್ಯೆ 'ಯ' ಸೇರಿಕೊಂಡು ರಾಯಚೂರಾಗಿ ಮಾರ್ಪಾಡಾಗಿದೆ. 'ರಾಯ' ಅಂದರೆ 'ರಾಜ' ರಾಯಚೂರು ಅಂದರೆ ರಾಜನ ಊರು ಎಂದು ಅರ್ಥವನ್ನು ಹೊಂದಿದೆ. ಈ ಸ್ಥಳವು ಬಹಳ ಮುಖ್ಯವಾದ ಊರಾಗಿತ್ತೆಂಬುದು ತಿಳಿದುಬರುತ್ತದೆ. ಹಿಂದಿ ಹಾಗೂ ಉರ್ದು ಭಾಷೆಯಲ್ಲಿ 'ರಾಯ' ಪದಕ್ಕೆ ಸಮನಾದ ಪದವು 'ರೈ' ಎಂಬುದಾಗಿದೆ. ಉರ್ದು ಭಾಷೆಯ ಪ್ರಭಾವದಿಂದ ಈ ಸ್ಥಳಕ್ಕೆ 'ರೈಚೂರು' ಹೆಸರು ಬಳಕೆಯಲ್ಲಿ ಬಂದಿರಬಹುದು (ಪಾಟೀಲ್ ಮತ್ತು ಬೆಟ್ಟದೂರು, ೧೯೯೩: ೯).

ರಾಯಚೂರು ಜಿಲ್ಲೆಯಲ್ಲಿ ಶಿಲಾಯುಗ ಸಂಸ್ಕೃತಿಯನ್ನು ದೇವದುರ್ಗ, ಗಂಗಾವತಿಯ ಚಿಕ್ಕಬೆಣಕಲ್, ಲಿಂಗಸೂಗೂರಿನ ಪಿಕ್ಕಿಹಾಳ, ಮಾನ್ವಿಯ ಬಯಲು ಮರ್ಚೇಡ ಹಾಗೂ ಸಿಂಧನೂರು, ಕೊಪ್ಪಳ ತಾಲೂಕುಗಳಲ್ಲಿ ಗುರುತಿಸಲಾಗಿದೆ.

ರಾಯಚೂರು ಜಿಲ್ಲೆಯ ಇತಿಹಾಸವು ಮೌರ್ಯರ ಕಾಲದಿಂದ ಪ್ರಾರಂಭವಾಗುತ್ತದೆ. ರಾಯಚೂರು ನಂದರ ಆಳ್ವಿಕೆಗೂ ಒಳಪಟ್ಟಿತ್ತೆಂದು ಊಹೆ ಇದೆ. ಈ ಜಿಲ್ಲೆಯಲ್ಲಿ ಅಶೋಕನ ೩ ಶಾಸನಗಳು ಲಿಂಗಸೂಗೂರು ತಾಲೂಕಿನ ಮಸ್ಕಿ, ಕೊಪ್ಪಳದ ಗವಿಮಠ ಹಾಗೂ ಪಾಲ್ಕಿಗುಂಡಗಳಲ್ಲಿ ದೊರಕಿವೆ. "ದೇವನಾಂಪ್ರಿಯ ಅಶೋಕ"ನ ಹೆಸರನ್ನು ಹೊಂದಿದ ಮಸ್ಕಿಯ ಶಾಸನವು ವಿಶೇಷ ಮಹತ್ವವನ್ನು ಪಡೆದಿದೆ. ಕ್ರಿ.ಶ.೫ನೇ ಶತಮಾನದಲ್ಲಿ ಕರಡಿಕಲ್ ಶಾಸನವು ರಾಯಚೂರು ಭಾಗಗಳಾದ ಮುದಗಲ್ ಹಾಗೂ ಕರಡಿಕಲ್ಲುಗಳು ಕದಂಬರ ಆಡಳಿತಕ್ಕೆ ಸಂಬಂಧಿಸಿದ್ದನ್ನು ಕಾಣುತ್ತೇವೆ.

ಬಾದಾಮಿಯ ಚಾಲುಕ್ಯರು ರಾಯಚೂರು ಜಿಲ್ಲೆಯಲ್ಲಿ ಆಡಳಿತವನ್ನು ನಡೆಸಿದ್ದರು. ಈ ಜಿಲ್ಲೆಯ ಕೊಪ್ಪಳ ತಾಲೂಕಿನ ಹಲಗೇರಿಯಲ್ಲಿ ವಿಜಯಾದಿತ್ಯನ ಆಡಳಿತಕ್ಕೆ ಸಂಬಂಧಿಸಿದ ಶಾಸನವು ಕೊಪ್ಪಳವನ್ನು 'ಕೊಪಣ' ಎಂದು ಸಂಬೋಧಿಸಿದೆ. ಐಹೊಳೆ ಶಾಸನವು ಎರಡನೇ ಪುಲಿಕೇಶಿಯು ಪಲ್ಲವರನ್ನು ಸೋಲಿಸಿ ರಾಯಚೂರನ್ನು ವಶಪಡಿಸಿಕೊಂಡಿದ್ದನೆಂದು ತಿಳಿಸಿದೆ. ಇದೇ ಕಾಲಕ್ಕೆ ಚೀನಾದ ಪ್ರವಾಸಿಯಾದ ಹುಯೆನ್ ತ್ಸ್ಯಾಂಗ್ ಕೊಪ್ಪಳಕ್ಕೆ ಭೇಟಿ ಕೊಟ್ಟಿದ್ದನು (ಪಾಟೀಲ್ ಮತ್ತು ಬೆಟ್ಟದೂರು, ೧೯೯೩ : ೯).

ರಾಯಚೂರಿನ ಇತಿಹಾಸದಲ್ಲಿ ಇನ್ನೊಂದು ಮುಖ್ಯ ಘಟ್ಟ ಎಂದರೆ ವಿಜಯನಗರ ಸಾಮ್ರಾಜ್ಯದ ಆಡಳಿತ. ವಿಜಯನಗರ ಹಾಗೂ ಬಹಮನಿ ಅರಸರು ಫಲವತ್ತಾದ ರಾಯಚೂರು ಪ್ರದೇಶದ ಆಧಿಪತ್ಯಕ್ಕಾಗಿ ಅನೇಕ ಯುದ್ಧಗಳನ್ನು ಮಾಡಿದ್ದರು. ರಾಯಚೂರು ರಣರಂಗವಾಗಿ ಏರ್ಪಟ್ಟಿತ್ತು. ಕ್ರಿ.ಶ.೧೫೨೦ರಲ್ಲಿ ವಿಜಯನಗರದ ಪ್ರಸಿದ್ಧ ಅರಸನಾದ ಕೃಷ್ಣದೇವರಾಯನು ಇಸ್ಮಾಯಿಲ್ ಆದಿಲ್ ಶಾಹನನ್ನು ಸೋಲಿಸಿ ರಾಯಚೂರು ಕೋಟೆಯನ್ನು ವಶಪಡಿಸಿಕೊಂಡಿದ್ದನು.

ವಿಜಯನಗರ ಆಡಳಿತ ಕಾಲವು ಸಾಹಿತ್ಯ ಹಾಗೂ ಸಂಸ್ಕೃತಿಯ ಬೆಳವಣಿಗೆಗೆ ಪ್ರಸಿದ್ಧವಾಗಿತ್ತು. ಪುರಂದರದಾಸರ ಪ್ರಭಾವದಿಂದಾಗಿ ರಾಯಚೂರು ಜಿಲ್ಲೆಯ ಸಂತರಾದ ಜಗನ್ನಾಥದಾಸ ಹಾಗೂ

ವಿಜಯದಾಸರು ಪ್ರಸಿದ್ಧ ದಾಸಸಾಹಿತ್ಯವನ್ನು ರಚಿಸಿದ್ದರು. ಕೃಷ್ಣದೇವರಾಯನ ಆಡಳಿತದ ನಂತರ ರಾಯಚೂರು ಪ್ರದೇಶ ಮತ್ತೆ ಬಿಜಾಪುರ ಸುಲ್ತಾನರ ವಶಕ್ಕೆ ಬಂದಿತು.

ಇದಾದ ನಂತರ ಮುಂದೆ ೧೭೯೯ರಲ್ಲಿ ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪು ಸುಲ್ತಾನ ಮರಣ ಹೊಂದಿದನು. ಮೈಸೂರು ರಾಜ್ಯದ ಅನೇಕ ಭಾಗಗಳನ್ನು ಬ್ರಿಟಿಷರು ತಮ್ಮ ವಶಕ್ಕೆ ತೆಗೆದುಕೊಂಡರು. ಇದರಿಂದ ಅಸಫ್‌ಜಾಹಿ ಮನೆತನದ ಐದನೆಯ ನಿಜಾಮ ಅಫಜಲ್ ಉದ್ದೌಲನು ಈ ಪ್ರದೇಶದ ಸರ್ವಾಧಿಕಾರಿಯಾದ. ನಂತರ ಮುಂದೆ ಏಳನೆಯ ನಿಜಾಮನಾದ 'ಮೀರ್ ಉಸ್ಮಾನ್ ಅಲಿಖಾನ್' ಅವರ ಕಾಲದಲ್ಲಿ ಸ್ವಾತಂತ್ರ್ಯ ಆಂದೋಲನವು ಪ್ರಾರಂಭವಾಗಿತ್ತು. ಇಡೀ ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಹೋರಾಟವು ತೀವ್ರವಾಗಿತ್ತು. ರಾಯಚೂರು ಪ್ರದೇಶದಲ್ಲಿ ಕೂಡ ಹೈದ್ರಾಬಾದ್ ನಿಜಾಮನ ವಿರುದ್ಧ ಹೋರಾಟ ಪ್ರಾರಂಭವಾಗಿ ಮುಂದೆ ಸೆಪ್ಟೆಂಬರ್ ೧೮, ೧೯೪೮ರಂದು ಹೈದ್ರಾಬಾದ್ ಸಂಸ್ಥಾನವು ಸ್ವಾತಂತ್ರ್ಯವಾಯಿತು. ಹೀಗೆ ಹೈದ್ರಾಬಾದ್ ಕರ್ನಾಟಕದಲ್ಲಿ ನಿಜಾಮನ ವಿರುದ್ಧ ನಡೆದ ಚಳವಳಿಯ ಪರಿಣಾಮವಾಗಿ ರಾಯಚೂರು ಪ್ರದೇಶದಲ್ಲಿ ಸಾಮಾಜಿಕ ಚಳವಳಿಗೆ ಪ್ರೇರಣೆಯಾಗಿ ರಾಯಚೂರಿನಲ್ಲಿ ಚಳವಳಿಗಳು ಹುಟ್ಟಿಕೊಂಡವು.

** ** **

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಚಳವಳಿಗಳು ನಡೆಯುವುದು ಸ್ವಾಭಾವಿಕ ಹಾಗೂ ಸಹಜ. ಪ್ರಜಾ ಪ್ರಭುತ್ವ ಜೀವಂತವಾಗಿರಲು, ಯಶಸ್ವಿಯಾಗಲು ಚಳವಳಿಗಳ ಪಾತ್ರ ಪ್ರಮುಖ. ಜನರಿಗೆ ಆಗುವ ಎಷ್ಟೋ ರೀತಿಯ ಅನ್ಯಾಯವನ್ನು ತಡೆಯುವುದಲ್ಲದೆ, ಸರಿಯಾದ ಹಾಗೂ ಸಮರ್ಪಕವಾದ ರೀತಿಯಲ್ಲಿ ಸರ್ಕಾರ ಕೆಲಸ ನಿರ್ವಹಿಸಬೇಕೆನ್ನುವುದು ಕೂಡ ಇಂತಹ ಚಳವಳಿಗಳ ಉದ್ದೇಶ. ಇದಕ್ಕಿಂತ ಮಿಗಿಲಾಗಿ ಜನರಲ್ಲಿ ಜಾಗೃತಿ ಮತ್ತು ಜವಾಬ್ದಾರಿಯನ್ನು ನಿರ್ಮಾಣ ಮಾಡುವ ಸಕಾರಾತ್ಮಕ ಕೆಲಸವೂ ಚಳವಳಿಗಳ ಉದ್ದೇಶವಾಗಿರುತ್ತದೆ. ಹಲವಾರು ಸಂದರ್ಭಗಳಲ್ಲಿ ಚಳವಳಿಗಳು ಸರ್ಕಾರದ ಸೂತ್ರ ಹಿಡಿದವರ ವಿರುದ್ಧವಾಗಿ ಮೇಲ್ನೋಟಕ್ಕೆ ಕಂಡರೂ ಅವು ನಿಜವಾಗಿ ಜನರಲ್ಲಿ ಜಾಗೃತಿ ಮೂಡಿಸುತ್ತವೆ.

ಪ್ರಸ್ತುತ ಸಂದರ್ಭದಲ್ಲಿ ರಾಯಚೂರಿನಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳು, ಪ್ರಬಲ ವರ್ಗಗಳಾದ ಲಿಂಗಾಯಿತ, ಬ್ರಾಹ್ಮಣ ಮತ್ತು ಒಕ್ಕಲಿಗ ಮುಂತಾದ ಸಮುದಾಯಗಳ ಬಲಾಢ್ಯ ವರ್ಗಗಳ ಶೋಷಣೆಗೆ ಸಿಲುಕಿರುವುದನ್ನು ನೋಡಬಹುದು. ಈ ಹಿನ್ನೆಲೆಯಲ್ಲಿ ಕೆಳವರ್ಗಗಳು ಬಂಡಾಯದ ನೆಲೆಗೆ ತೆರೆದುಕೊಳ್ಳುವುದರೊಂದಿಗೆ ಅನೇಕ ಬಗೆಯ ಸಾಮಾಜಿಕ ಚಳವಳಿಗಳಿಗೆ ತಮ್ಮನ್ನು ಅರ್ಪಿಸಿಕೊಂಡಿವೆ. ಜನರಿಂದ ಅದರಲ್ಲೂ ಶೋಷಣೆಗೆ ಒಳಪಟ್ಟ ಜನರಿಂದ ಆರಂಭವಾದ ದಲಿತ ಚಳವಳಿ, ರೈತ ಚಳವಳಿ, ಸಾಕ್ಷರತಾ ಚಳವಳಿ, ಮಾದಿಗ ಚಳವಳಿ, ಕಾರ್ಮಿಕ ಚಳವಳಿ ಮತ್ತು ಬೀದಿನಾಟಕ ಚಳವಳಿ ಹೀಗೆ ಅನೇಕ ಬಗೆಯ ಚಳವಳಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ

ದಾಖಲು ಮಾಡಿ, ವಿಶ್ಲೇಷಿಸಲು ಪ್ರಯತ್ನಿಸಿದೆ. ಎರಡನೆಯ ಅಧ್ಯಾಯವು ರಾಯಚೂರು ಪ್ರದೇಶದ ಸಾಮಾಜಿಕ ಚಳವಳಿಗಳ ಹುಟ್ಟು ಮತ್ತು ಬೆಳವಣಿಗೆ ಕುರಿತು ಚರ್ಚಿಸುತ್ತದೆ. ಈ ಚಳವಳಿಗಳಿಗೆ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯನ್ನು ಗ್ರಹಿಸಿ ಅವು ರಾಯಚೂರು ಪ್ರದೇಶದಲ್ಲಿ ಪ್ರಭಾವ ಬೀರಲು ಕಾರಣೀಭೂತ ಅಂಶಗಳನ್ನು ಚರ್ಚಿಸಲಾಗಿದೆ. ಇವುಗಳ ವಿವರವನ್ನು ಅಧ್ಯಾಯ ಮೂರರಲ್ಲಿ ವಿವರಿಸಲಾಗಿದೆ. ಅಧ್ಯಾಯ ನಾಲ್ಕರಲ್ಲಿ ಸರ್ಕಾರವೇ ರೂಪಿಸಿದ ಜನಾಂದೋಲನಗಳನ್ನು ದಾಖಲು ಮಾಡಲಾಗಿದೆ. ಈ ಭಾಗದಲ್ಲಿ ಸಾಕ್ಷರತಾ ಚಳವಳಿ ಮತ್ತು ಸಮುದಾಯ ಚಳವಳಿಗಳು ಮುಖ್ಯವಾಗಿವೆ. ಇದರೊಂದಿಗೆ ಸರ್ಕಾರೇತರ ಸಂಸ್ಥೆಗಳ (ನಾನ್ ಗವರ್ನ್‌ಮೆಂಟ್ ಆರ್ಗ್‌ನೈಜೇಷನ್ಸ್) ಅನುದಾನದಿಂದ ನಡೆಯುತ್ತಿರುವ ಸರ್ಕಾರೇತರ ಸಂಸ್ಥೆಗಳು ಮತ್ತು ಸಮುದಾಯ ಅಭಿವೃದ್ಧಿ ಚಳವಳಿಗಳ ವಿವರಗಳನ್ನು ದಾಖಲಿಸಲಾಗಿದೆ. ರಾಯಚೂರಿನ ಸುಮಾರು ಹದಿನಾರು ಕಡೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ, ಮುಖ್ಯವಾಗಿ ಅಂಗವಿಕಲತೆ ಸುಧಾರಣೆ, ಸಮಗ್ರ ಗ್ರಾಮೀಣ ಅಭಿವೃದ್ಧಿ, ಭೂ ಅಭಿವೃದ್ಧಿ, ವಿಶೇಷವಾಗಿ ಸ್ಲಂ ಜನರ ಸುಧಾರಣೆ ಮತ್ತು ಹೆಚ್.ಐ.ವಿ. ಪೀಡಿತರಿಗೆ ಧೈರ್ಯ ತುಂಬುವ ಕಾರ್ಯಕ್ರಮಗಳನ್ನು ಕೇಂದ್ರವಾಗಿಟ್ಟುಕೊಂಡು ಇವುಗಳು ಕಾರ್ಯ ನಿರ್ವಹಿಸುತ್ತಿವೆ. ಇವುಗಳ ವಿವರಗಳನ್ನು ಅಧ್ಯಾಯ ನಾಲ್ಕರಲ್ಲಿ ಚರ್ಚಿಸಲಾಗಿದೆ.

## ಅಧ್ಯಯನದ ಉದ್ದೇಶ

ರಾಯಚೂರು ಪ್ರದೇಶದ ಕುರಿತು ಅಧ್ಯಯನಗಳು ನಡೆದಿವೆಯಾದರೂ ಅವು ಬಹಳ ಕಡಿಮೆಯೇ. ರಾಯಚೂರು ಪ್ರದೇಶದ ಸಾಮಾಜಿಕ ಚಳವಳಿಗೆ ಸಂಬಂಧಪಟ್ಟಂತೆ ಲೇಖನಗಳು ಬಂದಿವೆಯಾದರೂ ಅವು ಅಗತ್ಯವಾದ ಮಾಹಿತಿಗಳನ್ನು ಒಳಗೊಳ್ಳದಿರುವುದು ಕಂಡುಬರುತ್ತದೆ. ಹಾಗೆಯೇ ಅವನ್ನು ಸಾಮಾಜಿಕ ಚಳವಳಿಯ ಸೈದ್ಧಾಂತಿಕ ನೆಲೆಗಟ್ಟಿನಲ್ಲಿ ಅರ್ಥೈಸುವ ಅಧ್ಯಯನವೂ ನಡೆಯದಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಈ ಬಗೆಯ ಅಧ್ಯಯನದ ಅವಶ್ಯಕತೆ ಇರುವುದರಿಂದ ಪ್ರಸ್ತುತ ಅಧ್ಯಯನ ಕೈಗೊಂಡು ಈ ಪ್ರದೇಶದಲ್ಲಿ ನಡೆದ ರೈತ ಚಳವಳಿ, ದಲಿತ ಚಳವಳಿ, ಮಾದಿಗ ಚಳವಳಿ ಮತ್ತು ಸಾಕ್ಷರತಾ ಚಳವಳಿ ಕುರಿತು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಈ ಚಳವಳಿಗಳ ಮಹತ್ವ ಉದ್ದೇಶ ಹಾಗೂ ಪ್ರಸ್ತುತ ಸಮಾಜದ, ಜನರ ಮೇಲೆ ಬೀರಿದ ಪ್ರಭಾವ ಕುರಿತು ಇಲ್ಲಿ ಚರ್ಚಿಸಲಾಗಿದೆ.

ಈ ಭಾಗದಲ್ಲಿ ಹೈದ್ರಾಬಾದ್ ಕರ್ನಾಟಕಕ್ಕೆ ವಿಶೇಷ ಸ್ಥಾನಮಾನ ನೀಡಬೇಕೆಂಬ ಬೇಡಿಕೆಯಿದೆ. ಜೊತೆಗೆ ಸಾಮಾಜಿಕವಾಗಿ ದಲಿತ ಚಳವಳಿಯು ಕೂಡ ಕೆಳಜಾತಿಗಳ ಸಮುದಾಯಗಳಲ್ಲಿ ಜಾಗೃತಿಯನ್ನು ಮೂಡಿಸುತ್ತಿದೆ. ಪಾರಂಪರಿಕ ವೃತ್ತಿಗಳಿಂದ ಬಿಡುಗಡೆಯಲ್ಲಿದ್ದ ದಲಿತರು ಮತ್ತು ರೈತರು ಅದೇ ಬಗೆಯ ಬಹಿಷ್ಕಾರ, ನೋವು, ದೌರ್ಜನ್ಯ ಮುಂತಾದ ಕ್ರೂರ ಪದ್ಧತಿಗಳನ್ನು ಎದುರಿಸುತ್ತಿದ್ದಾರೆ. ಹೀಗಾಗಿ ಈ ಪ್ರದೇಶದಲ್ಲಿ ಈ ಬಗೆಯ ಚಳವಳಿಗಳನ್ನು ಕುರಿತು ತಾತ್ವಿಕ ನೆಲೆಗಟ್ಟಿನಲ್ಲಿ ಅರ್ಥಮಾಡಿಕೊಳ್ಳಲು ಈ ಅಧ್ಯಯನವು ಪ್ರಯತ್ನಿಸುತ್ತಿದೆ.

## ವಿಧಾನ ಮತ್ತು ವ್ಯಾಪ್ತಿ

ಪ್ರಸ್ತುತ ಅಧ್ಯಯನಕ್ಕೆ ಚಾರಿತ್ರಿಕ ಮತ್ತು ಮೌಖಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಪ್ರಕಟಿತ, ಅಪ್ರಕಟಿತ ಲೇಖನಗಳನ್ನು ಮತ್ತು ಗ್ರಂಥಗಳನ್ನು ಹಾಗೂ ಇತರೆ ಆಕರ ಸಾಮಗ್ರಿಗಳನ್ನು ಇಲ್ಲಿ ಬಳಸಲಾಗಿದೆ. ರಾಯಚೂರು ಪ್ರದೇಶದ ಬಗ್ಗೆ ಹೆಚ್ಚಿನ ಅಧ್ಯಯನ ಮಾಡಿದವರನ್ನು ಸಂಪರ್ಕಿಸಿ ತಾತ್ವಿಕವಾಗಿ ಚರ್ಚಿಸುವುದರ ಜೊತೆಗೆ ಆಕರಗಳನ್ನು ಸಂಗ್ರಹಿಸಿದ್ದೇನೆ. ಹೀಗೆ ಸಂಗ್ರಹಿಸಿದ ಮಾಹಿತಿಯನ್ನು, ವಿವರಗಳನ್ನು ವರ್ಗೀಕರಿಸಿಕೊಂಡು ಚರಿತ್ರೆಯ ಶಿಸ್ತಿನ ವಿಧಿ-ವಿಧಾನಗಳ ಮೂಲಕ ಪರಿಶೀಲಿಸುವ ಪ್ರಯತ್ನ ಇಲ್ಲಿನದು. ಒಟ್ಟಾರೆ ಈ ಪ್ರದೇಶದ ಮೇಲೆ ಚಳವಳಿಗಳ ಪರಿಣಾಮವನ್ನು ಕುರಿತು ಸಾಮಾಜಿಕ ಮತ್ತು ಆರ್ಥಿಕ, ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಈ ಅಧ್ಯಯನಕ್ಕೆ ಸಮಾಜ ವಿಜ್ಞಾನಗಳ ಚರಿತ್ರೆಯ ಸಂಶೋಧನಾ ವೈಜ್ಞಾನಿಕತೆಯನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನದ ವ್ಯಾಪ್ತಿಯು ರಾಯಚೂರು ಪ್ರದೇಶ ಹಾಗೂ ತಾಲೂಕುಗಳನ್ನು ಕೇಂದ್ರ ಬಿಂದುವನ್ನಾಗಿ ಇರಿಸಿಕೊಂಡಿದೆ. ಎಪ್ಪತ್ತರ ದಶಕದಲ್ಲಿ ನಡೆದ ಸಾಮಾಜಿಕ ಚಳವಳಿಗಳ ಹುಟ್ಟು, ಬೆಳವಣಿಗೆ ಮತ್ತು ಅವುಗಳ ಮಹತ್ವ ಹಾಗೂ ಚಳವಳಿಯ ವಿವಿಧ ಮಾದರಿಗಳು ಈ ಅಧ್ಯಯನಕ್ಕೆ ಸೀಮಿತವಾಗಿವೆ. ಪ್ರಸ್ತುತ ಚಳವಳಿಯ ಅಂಶಗಳನ್ನು ಕೂಡ ಈ ಅಧ್ಯಯನವು ಒಳಗೊಂಡಿದೆ.

ಭಾರತೀಯರಲ್ಲಿ ಮೊಟ್ಟ ಮೊದಲ ಬಾರಿಗೆ ಚಳವಳಿ ರೂಪುಗೊಂಡದ್ದು ಬ್ರಿಟಿಷರ ವಿರುದ್ಧ. ಬ್ರಿಟಿಷ್ ಸಾಮ್ರಾಜ್ಯಶಾಹಿ, ವಸಾಹತುಶಾಹಿ ಚರಿತ್ರೆಯನ್ನು ಪುನರ್ ರೂಪಿಸುವ ಚಳವಳಿಯನ್ನು ಪ್ರಾರಂಭಿಸಿದರು. ಭಾರತೀಯರ ಮೊದಲು ಬ್ರಿಟಿಷರಿಂದ ಮುಕ್ತರಾಗಲು ಹಲವಾರು ಚಳವಳಿಗಳನ್ನು ನಡೆಸಿರುವುದು ನಮ್ಮ ದೇಶದಲ್ಲಿ ಕಂಡುಬರುತ್ತದೆ. ಇಂತಹ ಚಳವಳಿಗಳ ಬೇರೆ ಬೇರೆ ವಿಷಯಕ್ಕೆ ಸಂಬಂಧಿಸಿದಂತೆ ಹಲವು ಹೋರಾಟಗಳು ನಡೆದಿವೆ. ಅದರಲ್ಲಿ ಸ್ವಾತಂತ್ರ್ಯ ಚಳವಳಿಯು ಪ್ರಮುಖ ಪಾತ್ರ ವಹಿಸುತ್ತದೆ. ಏಕೆಂದರೆ ಈ ಸ್ವಾತಂತ್ರ್ಯ ಚಳವಳಿಯು ಇತರರ ಚಳವಳಿಗೆ ಪ್ರೇರಕವಾಗಿದೆ. ಇಂತಹ ಚಳವಳಿಗಳು ಇಡೀ ಭಾರತದ ಇತಿಹಾಸದಲ್ಲಿ ಚಿರಸ್ಮರಣೀಯವಾದ ಚಳವಳಿ ಆಗಿವೆ. ಅಂತವುಗಳಲ್ಲಿ ಕರ್ನಾಟಕದಲ್ಲಿ ೧೯೪೨ರಲ್ಲಿ ನಡೆದ 'ಚಲೇಜಾವ್' ಚಳವಳಿ ಕೂಡ ಒಂದು. ಇದರ ಪ್ರಭಾವ ರಾಯಚೂರು ಪ್ರದೇಶದ ಮೇಲೆ ಬೀರಿದೆ. ಹೈದರಾಬಾದ್ ಕರ್ನಾಟಕದಲ್ಲಿ ೧೯೪೨ರಲ್ಲಿ ನಡೆದ ರಾಯಚೂರು ಪ್ರದೇಶದ ಹಲವಾರು ಪ್ರಮುಖರು ಅಂದರೆ ಚಳವಳಿಗಾರರು ವಿದ್ಯಾರ್ಥಿಗಳು, ಮಹಿಳೆಯರು ಮುಂತಾದ ಜನರು ಭಾಗವಹಿಸಿದ್ದರು (ನುಗಡೋಣಿ, ೨೦೦೦ : ೧೬). ಈ ಪ್ರೇರಕ ಅಂಶಗಳೇ ಮುಂದೆ ಹೈದರಾಬಾದ್ ನಿಜಾಮನ ವಿರುದ್ಧ ಹೋರಾಟ ನಡೆಯಲು ಕಾರಣವಾಯಿತು. ನಿಜಾಮನ ವಿರುದ್ಧ ರಾಯಚೂರು ಪ್ರದೇಶದಲ್ಲಿ ಭಾರತ ಒಕ್ಕೂಟ ಸೇರಲು ನಡೆದ ಚಳವಳಿಯಲ್ಲಿ ರಾಯಚೂರು ಜನತೆಯ ಪಾತ್ರ ತುಂಬಾ ಮಹತ್ವದಾಗಿದೆ. ಮುಂದೆ ಈ ರಾಯಚೂರಲ್ಲಿ ರಾಘುಜೋಶಿ, ಮಠಮಾರಿ ನಾಗಪ್ಪ, ಗುಡಿಹಾಳ ಹನುಮಂತರಾವ್ ಮುಂತಾದವರು ಹೈದರಾಬಾದ್ ಕರ್ನಾಟಕವನ್ನು ಭಾರತ ಒಕ್ಕೂಟಕ್ಕೆ ಸೇರಿಸಲು ರಾಯಚೂರು ಪ್ರದೇಶದಲ್ಲಿ ಇವರ ನೇತೃತ್ವದಲ್ಲಿ ನಡೆದ ಚಳವಳಿಯು ಯಶಸ್ವಿಯಾಯಿತು. ಇಂತಹ ಚಳವಳಿಗಳು ಮುಂದೆ ಜನರಲ್ಲಿ ಪ್ರಭಾವಿತವಾಗಿ ರಾಯಚೂರು ಪ್ರದೇಶದಲ್ಲಿ ನಡೆದ ಸಾಮಾಜಿಕ ಚಳವಳಿಗೆ ಪ್ರೇರಣೆಯಾದವು.

ಸ್ವಾತಂತ್ರ್ಯಪೂರ್ವದಲ್ಲಿ ಗಾಂಧೀಜಿಯವರು ನೆಚ್ಚಿಕೊಂಡಿದ್ದ ಸತ್ಯ-ಅಹಿಂಸೆಗಳ ಆದರ್ಶಗಳಲ್ಲಿ ನಂಬಿಕೆ ಇರಿಸಿ ಸ್ವಾತಂತ್ರ್ಯ ಚಳವಳಿಯಲ್ಲಿ ಭಾರತೀಯರು ಭಾಗವಹಿಸಿದ್ದರು. ಆದರೆ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಶೋಷಣೆಗಳು ಮೇಲುಗೈ ಸಾಧಿಸಿರುವ ಈ ಸಂದರ್ಭದಲ್ಲಿ ಸಾಮಾಜಿಕ ನ್ಯಾಯಕ್ಕಾಗಿ ಅನೇಕ ಚಳವಳಿಗಳು ಹುಟ್ಟಿಕೊಂಡಿವೆ. ಜನಗಳಲ್ಲಿ ಹೊಸದಾಗಿ ಉಂಟಾದ ಬೌದ್ಧಿಕ ಹಾಗೂ ರಾಜಕೀಯ ತಾಕಲಾಟಗಳು ಸಾಮಾಜಿಕ ಬದಲಾವಣೆಗಾಗಿ ಚಳವಳಿಗೆ ಎಡೆಗೊಟ್ಟವು. ಕೆಳಜಾತಿಗಳ ಜನರು ಹಾಗೂ ಸ್ತ್ರೀಯರು ದಬ್ಬಾಳಿಕೆಗೊಳಗಾಗಿರುವ ತಮ್ಮ ಸ್ಥಿತಿಯನ್ನು ಗಮನಕ್ಕೆ ತಂದುಕೊಂಡು ಸಮಾಜದ ಪುನರ್ ವ್ಯವಸ್ಥೆಗಾಗಿ ಹೋರಾಡತೊಡಗಿದಾಗ ಸಾಮಾಜಿಕ ಬದಲಾವಣೆ ಅತ್ಯಂತ ಬಲ ಬಂದಿತು. ಜ್ಯೋತಿಬಾ

ಫುಲೆ, ದಯಾನಂದ ಸರಸ್ವತಿ ಮತ್ತು ರಾಜಾರಾಮ ಮೋಹನರಾಯರಂತಹ ವ್ಯಕ್ತಿಗಳ ನಾಯಕತ್ವದಲ್ಲಿ ಕೆಳಜಾತಿಗಳ ಜನರು ೧೯ನೇ ಶತಮಾನದ ಕೊನೆಯಿಂದಲೇ ಬಲಯುತವಾದ ಚಳವಳಿಗಳನ್ನು ಪ್ರಾರಂಭಿಸಿದರು. ಇಂತಹ ಹೋರಾಟಗಳು ಇಡೀ ಸಮಾಜದ ಮೇಲೆ ಪ್ರಭಾವ ಬೀರಿತು. ಸಮಾಜದಲ್ಲಿ ಕೆಳಸ್ತರದ ಜನರು ತಾವು ಸೌಲಭ್ಯಗಳಿಂದ ವಂಚಿತರಾಗಿದ್ದೇವೆ ಎಂಬ ಭಾವನೆ ತಳೆದಿರುತ್ತಾರೆ. ಇತರ ಸಮುದಾಯಗಳಿಗೆ ಅಥವಾ ಇತರ ವರ್ಗಗಳಿಗೆ ಲಭ್ಯವಿರುವ ಸಂಪತ್ತು ಸ್ಥಾನಮಾನಗಳು ತಮಗೆ ಲಭ್ಯವಿಲ್ಲವೆಂದು ಅವರು ಭಾವಿಸುತ್ತಾರೆ. ಇದೇ "ಸಾಪೇಕ್ಷ ಅಲಭ್ಯತ ಭಾವನೆ". ಇಂಥ ಭಾವನೆಯುಳ್ಳ ಜನಸಮೂಹವು ರಾಯಚೂರು ಪ್ರದೇಶದಲ್ಲಿ ಬೇರೊಂದು ಸಮೃದ್ಧ ಸಮೂಹದ ಜನರು ಪಡೆಯುತ್ತಿರುವ ಅಧಿಕಾರ, ಸ್ಥಾನಮಾನ, ಸವಲತ್ತುಗಳಿಗಾಗಿ ಬಯಸುತ್ತಾರೆ. ಹೀಗೆ ಬಯಸುವುದರಿಂದಲೇ ಸದ್ಯದ ಸಮಾಜದ ರಚನೆಯಲ್ಲಿ ಮತ್ತು ರಾಯಚೂರು ಪ್ರದೇಶದಲ್ಲಿ ಸಾಮಾಜಿಕ ಸಂರಚನೆಯ ಪ್ರಕ್ರಿಯೆ ಉಂಟಾಗಿರುವುದರಿಂದ ಈ ಪ್ರದೇಶದಲ್ಲಿ ನಡೆದಿರುವ ಕೆಲವು ಚಳವಳಿಗಳು ಸಾಕ್ಷಿಯಾಗಿವೆ.[೧]

ಚಳವಳಿ, ದಂಗೆ, ಕ್ರಾಂತಿ ಇವೆಲ್ಲ ಸಾಮಾಜಿಕ ಚಲನೆಯ ವಿವಿಧ ರೂಪಗಳು. ಚಲನೆಯ ಗತಿ ಹಾಗೂ ಮಾರ್ಗ ಕಾಲಕಾಲಕ್ಕೆ ಬದಲಾಗುವ ಸಂಭವ ಇದ್ದೇ ಇರುತ್ತದೆ ಎಂಬುದು ಈ ಪ್ರದೇಶದಲ್ಲಿ ನಡೆದ ಸಾಮಾಜಿಕ ಚಳವಳಿಗಳಲ್ಲಿ ಕಾಣಬಹುದು.

ಮನುಷ್ಯ ಸಮಾಜ ಜೀವಿ. ಆತ ನಾಗರಿಕ ಸ್ವರೂಪದ ಸಮಾಜ ಕಟ್ಟಿಕೊಳ್ಳುವ ಮುಂಚೆಯೇ ಪ್ರಾಣಿ ಸ್ವರೂಪದ ಅನಾಗರಿಕ ಎಂದು ಕರೆಯುವ ಕಾಲದಲ್ಲೂ ಗುಂಪಾಗಿ ಬದುಕುವುದನ್ನೇ ರೂಪಿಸಿಕೊಂಡಿದ್ದನು. ಹೀಗೆ ಗುಂಪಾಗಿ ಬದುಕುವ ಸಂದರ್ಭದಲ್ಲಿ ಆತನಿಗೆ ಸಮಾಜದ ಅಥವಾ ಸಮಾದಾಯದ ಯಾವುದೇ ಕಟ್ಟುಪಾಡುಗಳಾಗಲೀ, ಹಕ್ಕುಬಾಧ್ಯತೆಗಳಾಗಲೀ ಬಾಧಿಸುತ್ತಿರಲಿಲ್ಲ. ಬರುಬರುತ್ತಾ ಈ ಗುಂಪು ನಾಗರಿಕಗೊಂಡಂತೆಲ್ಲಾ, ಕುಟುಂಬ, ಸಮಾಜ, ಸಮುದಾಯಗಳೆಂಬ ಸಂಸ್ಥೆಗಳು ರೂಪುಗೊಂಡವು. ಮುಂದೆ ಈ ಸಂಸ್ಥೆಗಳು ವ್ಯವಸ್ಥಿತವಾಗಿ ಮುನ್ನಡೆಯಲು ಒಂದು ಅನುಸಂಧಾನ ಅನಿವಾರ್ಯವಾಗಿತ್ತು. ಈ ಅನುಸಂಧಾನ ಏನೆಂದರೆ, ಸಾಮಾಜಿಕ ಅಥವಾ ಸಾಮುದಾಯಿಕ ಬದುಕಿನ ಜೊತೆಗೆ ರಾಜಕೀಯ, ಆರ್ಥಿಕ, ಧಾರ್ಮಿಕ, ನೈತಿಕತೆಯನ್ನೊಳಗೊಂಡ ಪ್ರಜಾಪ್ರಭುತ್ವವೆಂದೋ, ಸಮಾಜವಾದವೆಂದೋ ಇಲ್ಲವೇ ಸಮತಾವಾದವೆಂದೋ ಯಾವುದಾದರೊಂದು ಕ್ರಮಕ್ಕೆ ಬದ್ಧವಾಗಿರುವುದು. ಹೀಗೆ ಬದ್ಧವಾಗಿರುವುದು ಎಂದರೆ ಮನುಷ್ಯ ನಾಗರಿಕತೆಯ ಹಂಬಲದಿಂದ ಸೃಷ್ಟಿಸಿಕೊಂಡ ಕುಂಟುಂಬ ಸಮಾಜ, ಸಮುದಾಯಗಳೆಂಬ ಸಂಸ್ಥೆಗಳೊಂದಿಗೆ ಎಲ್ಲವೂ ತನಗಾಗಿ ಮತ್ತು ತಾನು ಎಲ್ಲವುಗಳಿಗಾಗಿ ಎಂಬಂತೆ ಬದುಕುವುದು. ಇದು ಆಧುನಿಕ ಸಂದರ್ಭದ ಕಲ್ಯಾಣರಾಜ್ಯ(welf are state)ದ ಮಾದರಿಯು ಆಗಿರುತ್ತದೆ (ಪಾಟೀಲ, ೨೦೦೨: ೩೮).

ಹಾಗಾದರೆ ಮನುಷ್ಯನ ಬದುಕನ್ನೆ ನಿಯಂತ್ರಿಸುವ ಕಲ್ಯಾಣರಾಜ್ಯ ಬೇಕೆ? ಅಂದರೆ ಈ ಅನುಸಂಧಾನ, ಬದ್ಧತೆಗಳು ಮನುಷ್ಯನ ಪ್ರಗತಿಗೆ ಎಷ್ಟು ಪೂರಕ? ಚಲನಶೀಲತೆ ಎನ್ನುವುದು ಬದುಕಿನ

ಸಹಜ, ಜೀವನವೆಂದರೆ ಚಲನೆಗಾಗಿ ಹಾರೈಸುವುದು ಮನುಷ್ಯನ ಜೀವದಾತುವಿನಲ್ಲಿ ಬೆರೆತುಬಂದ ಗುಣವೇ ಆಗಿದೆ. ಈ ಕಾರಣದಿಂದ ಮನುಷ್ಯ ಕೃತಕವಾಗಿ ಸೃಷ್ಟಿಸಿಕೊಂಡ 'ರಾಜ್ಯ' (State) ಅಥವಾ ಇನ್ನಾವುದೇ ವ್ಯವಸ್ಥೆ ಚಲನಶೀಲತೆಯನ್ನು, ಪರಿವರ್ತನೆಯನ್ನು, ಸ್ಥಿತ್ಯಂತರಗಳನ್ನು ಪ್ರೋತ್ಸಾಹಿಸಬಲ್ಲದೇ? ಚರಿತ್ರೆಯಲ್ಲಿ 'ಸ್ಟೇಟ್'ನ ಕೈಮೇಲಾದಾಗಲೆಲ್ಲಾ ಪರಿವರ್ತನೆಯನ್ನು ನಿರಾಕರಿಸಿದ್ದು ಕಂಡುಬರುತ್ತದೆ. ಆಗ ಹುಟ್ಟಿ ಕೊಂಡಿದ್ದು 'ಚಳವಳಿ'. ಹೀಗೆ ಚಳವಳಿ ಸಮಾಜದ ಅಥವಾ ವಿಶಾಲಾರ್ಥದಲ್ಲಿ ಮನುಷ್ಯನ ಒಟ್ಟು ಬದುಕಿನ ಪರಿವರ್ತನೆಗೆ ಸಂಬಂಧಿಸಿದ್ದಾಗಿದೆ (ಪಾಟೀಲ, ೨೦೦೨: ೩೮).

** ** **

'ಚಳವಳಿ' ಎಂಬುದು ಇಂಗ್ಲೀಷಿನ Movement ಪದದ ಸಮಾನಾರ್ಥಕ ಕನ್ನಡ ಪದವಾಗಿದೆ. ಫ್ರೆಂಚ್ ಭಾಷೆಯ ಕ್ರಿಯಾಪದವಾದ Movior ಎಂಬುದರಿಂದ Movement ಎಂಬ ಇಂಗ್ಲಿಷ್ ಪದ ಬಳಕೆಗೆ ಬಂದಿದೆ. ಆಕ್ಸ್‌ಫರ್ಡ್ ಇಂಗ್ಲಿಷ್ ಶಬ್ದಕೋಶದಲ್ಲಿ Movement ಪದವನ್ನು 'A curse of series of actions and endeavours on the part of persons, moving or tending more are less continuously towards some special end.' ಎಂದು ವಿವರಣೆ ನೀಡಲಾಗಿದೆ. ಅಂದರೆ ನಿರ್ದಿಷ್ಟಗೊಳಿಸಿದ ವಿಶೇಷ ಗುರಿಯ ಕಡೆಗೆ ತಲುಪಲು ವ್ಯಕ್ತಿಗಳ ಗುಂಪು ಒಂದು ನಿರಂತರವಾಗಿ ನಡೆಸುವ ಚಟುವಟಿಕೆಗಳೇ ಸಾಮಾಜಿಕ ಚಲನೆಗಳಾಗಿವೆ (ಪಾಟೀಲ, ೨೦೦೨: ೩೯).

ಒಂದು ಕಾಲದಲ್ಲಿ ಸಾಮಾನ್ಯವಾಗಿ ಬಳಸಲ್ಪಡುತ್ತಿದ್ದ 'ಜನಸಂದಣಿ' 'ಗುಂಪು' ಎಂಬರ್ಥವನ್ನು ಮೀರಿ 'ಚಳವಳಿ' ಪದವು ಇಂದು ವಿಸ್ತಾರಗೊಂಡಿದೆ. 'ಚಳವಳಿ'ಯು ಪ್ರಜಾಪ್ರಭುತ್ವದ ಸಂದರ್ಭದಲ್ಲಿ ಹಕ್ಕೊತ್ತಾಯದ ಅಸ್ತ್ರವಾಗಿ ಮಹತ್ವ ಪಡೆದಿದೆ. ಉದಾಹರಣೆಗೆ ಮೀಸಲಾತಿಗೆ ಸಂಬಂಧಿಸಿದ ಚಳವಳಿಗಳು. ಅದೇ ರೀತಿ ಭಾರತ ಸ್ವಾತಂತ್ರ್ಯ ಹೋರಾಟದ ಅಂಗವಾಗಿ ನಡೆದ 'ಅಸಹಕಾರ ಚಳವಳಿ', 'ಕ್ವಿಟ್ ಇಂಡಿಯಾ'ದಂತಹ ಚಳವಳಿ ಇವು ಪ್ರಜಾಪ್ರಭುತ್ವದ ಅಸ್ತಿತ್ವಕ್ಕಾಗಿ ನಡೆಸಿದ ಚಳವಳಿಗಳಾಗಿವೆ.

ಜನಸಂದಣಿ(Mob) ಎಂಬ ಪದ ಸುಲಭವಾಗಿ ಮೋಸಕ್ಕೆ ಒಳಗಾಗುವ ಚಂಚಲ ಸ್ವಭಾವದ, ಪಕ್ಷಪಾತದಿಂದ ಕೂಡಿದ, ಕನಿಷ್ಠ ಮಟ್ಟದ ಅಭಿರುಚಿ ಮತ್ತು ಅಭ್ಯಾಸಗಳಿಂದ ಕೂಡಿದ ಜನರ ಗುಂಪನ್ನು ಸೂಚಿಸುವ ಪದವಾಗಿದೆ. ಇಂತಹ ಗುಂಪುಗಳು 'ಸಂಸ್ಕೃತಿ'ಗೆ ನಿರಂತರವಾಗಿ ಬೆದರಿಕೆ ಒಡ್ಡುತ್ತವೆ ಎಂದು ರೇಮಂಡ್ ವಿಲಿಯಮ್ಸ್ ಹೇಳಿದ್ದಾನೆ (ನಾಗರಾಜ, ಸಾಮಾಜಿಕ ಚಳವಳಿಗಳು, ೧೯೯೯: ೯). ಆದರೆ ಚಳವಳಿಗೆ ಶಿಸ್ತಿದೆ. ಅದಕ್ಕೊಂದು ಗುರಿಯಿದೆ. ಇದು ಗುರಿಸಾಧನೆಗಾಗಿ ದುಷ್ಕೃತ್ಯಕ್ಕಿಳಿಯದೆ ಸಾಮೂಹಿಕ ಒಗ್ಗಟ್ಟಿನ ಬಲವಿದೆ. ನಂಬಿದ ತತ್ವಗಳ ಕಳಕಳಿಯಿಂದ ಮುನ್ನಡೆಯುತ್ತದೆ. ಜನಸಂದಣಿಗಿರುವ ಅನಿಯಂತ್ರಿತ, ಅಸಭ್ಯವಾದ ಪ್ರವೃತ್ತಿಗೆ ಬದಲಾಗಿ ಚಳವಳಿ, ಪ್ರತಿಷ್ಠೆ, ಅಂತಸ್ತು, ಆತ್ಮವಿಶ್ವಾಸದಂತಹ ಮೌಲ್ಯಗಳನ್ನು ರೂಢಿಸಿಕೊಂಡಿರುತ್ತದೆ. ಸಾಹಿತ್ಯಿಕ ಚಳವಳಿಗಳು ಈ ಸ್ವರೂಪದವು.

ಚಳವಳಿಗೆ ಪ್ರಾಪ್ತವಾಗಿರುವ ವಿಶಾಲವ್ಯಾಪ್ತಿಯ ಕಾರಣದಿಂದಾಗಿ ಈಚೆಗೆ ಅದನ್ನು ವಿಭಿನ್ನ ಅರ್ಥಗಳಲ್ಲಿ ಬಳಸುತ್ತಿರುವುದು ಕಂಡುಬರುತ್ತದೆ. ಸಂಘಟನೆ (Organisation), ಸಮೂಹ (Group) ಮುಂತಾಗಿ ಸಾಮಾಜಿಕ ಬರಹಗಳಲ್ಲಿ ಬಳಸುತ್ತಿರುವುದು ಚಳವಳಿಯ ಹಿನ್ನೆಲೆಯಾಗಿಯೇ (ಪಾಟೀಲ, ೨೦೦೨ : ೪೦).

ಚಳವಳಿ ಎನ್ನುವುದು ಗಂಭೀರ ವಿಷಯ. ವ್ಯವಸ್ಥೆಯನ್ನೆ ಅಲುಗಾಡಿಸುವ ಅಂತಃಶಕ್ತಿಯ ಕಾಯಕ. ಪರ್ಯಾಯ ಆಲೋಚನೆ, ಪರ್ಯಾಯ ವ್ಯವಸ್ಥೆ ಕಟ್ಟುವ ಮಹತ್ತರ ಹೊಣೆಗಾರಿಕೆಯದು.[೨] ಈ ರೀತಿಯ ಸಾಮಾಜಿಕ ಚಳವಳಿಗಳು ಪ್ರದೇಶದಲ್ಲಿ ಹುಟ್ಟಿಕೊಂಡು ಸಾಮಾಜಿಕ ವ್ಯವಸ್ಥೆಯ ಮೇಲೆ ಪರಿಣಾಮ ಬೀರಿದೆ.

ಚಳವಳಿಗಳನ್ನು ಆರ್ಥಿಕ ಹಿನ್ನೆಲೆಯಿಂದ ನೋಡಿದಾಗ ಇಲ್ಲಿ ಲಿಂಗಾಯಿತರು, ಒಕ್ಕಲಿಗರು ಮತ್ತು ಬ್ರಾಹ್ಮಣರು ಪ್ರಾಬಲ್ಯತೆ ಹೊಂದಿದ್ದಾರೆ. ತುಳಿತಕ್ಕೆ ಒಳಗಾದವರು, ದಲಿತರು ಇಲ್ಲಿ ಆರ್ಥಿಕವಾಗಿ ಪ್ರಬಲರಾಗಿಲ್ಲ. ಆದರೆ ಮೇಲಿನ ಮೂರು ಜಾತಿಗಳು ನಮ್ಮ ಕರ್ನಾಟಕದಲ್ಲಿ ಅತಿ ಹೆಚ್ಚು ಪ್ರಬಲ ಮತ್ತು ಆರ್ಥಿಕವಾಗಿ ಜಮೀನ್ದಾರಿ ಪದ್ಧತಿಯವರಾಗಿದ್ದಾರೆ.

ಇಲ್ಲಿ ಹೆಚ್ಚಾಗಿ ದಲಿತರು ಯಜಮಾನ ಪದ್ಧತಿಯ ಶೋಷಣೆಗೆ ಒಳಗಾಗಿದ್ದಾರೆ. ದಲಿತರು ಶತಮಾನಗಳಿಂದ ಶೋಷಣೆಗೆ ಒಳಗಾಗುತ್ತ ಬಂದಿದ್ದಾರೆ. ಅದೇ ರೀತಿ ಈ ರಾಯಚೂರು ಪ್ರದೇಶದಲ್ಲಿ ಕೂಡ ಹಿಂದುಳಿದ ಜಾತಿಗಳು ಮತ್ತು ದಲಿತರ ಸ್ಥಿತಿಗತಿ ತುಂಬಾ ಸಂಕಷ್ಟದ ಪರಿಸ್ಥಿತಿಯಲ್ಲಿದೆ. ಕೋಷ್ಟಕವನ್ನು ನೋಡಿ.

**ರಾಯಚೂರು ಜಿಲ್ಲೆಯ ವಿವಿಧ ಜಾತಿಗಳ ಜನಸಂಖ್ಯಾ ಪ್ರಮಾಣ**

| ಕ್ರ.ಸಂ. | ಜಾತಿಗಳು | ಜನಸಂಖ್ಯಾ ಪ್ರಮಾಣ (ಶೇಕಡಾ) |
|---|---|---|
| ೧. | ಬ್ರಾಹ್ಮಣರು | ೩.೧೮ |
| ೨. | ಲಿಂಗಾಯಿತರು | ೧೬.೦೦ |
| ೩. | ಒಕ್ಕಲಿಗರು | ೧೨.೦೦ |
| ೪. | ಪರಿಶಿಷ್ಟ ಜಾತಿ | ೧೭.೦೦ |
| ೫. | ಪರಿಶಿಷ್ಟ ಪಂಗಡ | ೪.೭೦ |
| ೬. | ಹಿಂದುಳಿದ ಜಾತಿಗಳು | ೨೯.೮೦ |

(ಚಂದ್ರಶೇಖರ್, ೨೦೦೩: ೧೧)

ರಾಯಚೂರು ಪ್ರದೇಶದಲ್ಲಿ ಜಮೀನ್ದಾರರ ವರ್ಗವಾದ ಲಿಂಗಾಯತ ಮತ್ತು ಒಕ್ಕಲಿಗರು ತಮ್ಮ ಗ್ರಾಮದಲ್ಲಿ ಪ್ರಬಲವರ್ಗವಾದ ಕಾರಣ ದಲಿತರನ್ನು ಶೋಷಣೆಗೆ ಒಳಪಡಿಸಿದ್ದಾರೆ ಎನ್ನುವ ವಿಚಾರ ಗಮನಾರ್ಹವಾಗಿದೆ. ಇಲ್ಲಿ ಸಾಮಾಜಿಕವಾಗಿ ದಲಿತರನ್ನು ದೇವಸ್ಥಾನದ ಒಳಗೆ ಹೋಗಲು ಬಿಡುವುದಿಲ್ಲ. ಅವರು ಊರಿನ ಪ್ರಮುಖ ಬಾವಿಯ ನೀರನ್ನು ಉಪಯೋಗಿಸುವಂತಿಲ್ಲ. ಭೂಮಿಯನ್ನು ಕೃಷಿ ಮಾಡು ವಂತಿಲ್ಲ- ಹೀಗೆ ಈ ರೀತಿಯ ಸಮಸ್ಯೆಗಳನ್ನು ದಲಿತರ ಮೇಲೆ ಹೇರಿದ ಪರಿಣಾಮವಾಗಿ ದಲಿತ ಮತ್ತು ರೈತ ಚಳವಳಿಗಳು ಹುಟ್ಟಿಕೊಂಡವು. ಇಲ್ಲಿನ ಕಾರ್ಮಿಕರ ಸ್ಥಿತಿಯೂ ಹಾಗೆಯೇ. ಬಂಡವಾಳಶಾಹಿ ಭೂಮಾಲೀಕರ ಕೈಯಲ್ಲಿ ಅವರು ದುಡಿದು ಶೋಷಣೆಗೆ ಒಳಗಾದ ಕಾರಣ ರಾಯಚೂರು ಪ್ರದೇಶದಲ್ಲಿ ಕಾರ್ಮಿಕ ಚಳವಳಿ ಹುಟ್ಟಿಕೊಂಡಿದೆ.

ರಾಯಚೂರು ಜಿಲ್ಲೆ ಹಿಂದುಳಿದಿರುವುದಕ್ಕೆ ಕಾರಣ ಇಲ್ಲಿನ ಅನಕ್ಷರತೆ, ಅವ್ಯವಸ್ಥೆ ಮತ್ತು ರಾಜಕೀಯ ನಾಯಕರ ಅಸಮರ್ಪಕ ಧೋರಣೆ ಹಾಗೂ ಸರ್ಕಾರದ ಸವಲತ್ತು ಪಡೆಯದ ಗ್ರಾಮಗಳು ಈ ಪ್ರದೇಶದಲ್ಲಿವೆ. ಕೇವಲ ಆರ್ಥಿಕ ಮತ್ತು ಸಾಮಾಜಿಕ ಶೋಷಣೆಗೆ ಒಳಪಟ್ಟಿರುವ ರಾಯಚೂರು ಪ್ರದೇಶದ ಜನರು ರಾಜಕೀಯವಾಗಿ ಕೂಡ ತುಳಿತಕ್ಕೆ ಒಳಗಾಗಿದ್ದಾರೆ. ಈ ಪ್ರದೇಶದಲ್ಲಿ ಬಹಳ ವರ್ಷಗಳಿಂದ ಈ ಸಮಸ್ಯೆ ಇದ್ದ ಕಾರಣ, ೧೯೬೦ರಿಂದ ೧೯೭೦ರ ದಶಕದಲ್ಲಿ ಕರ್ನಾಟಕದಲ್ಲಿ ಹುಟ್ಟಿಕೊಂಡ ಸಾಮಾಜಿಕ ಚಳವಳಿಗಳ ಪ್ರಭಾವ ರಾಯಚೂರು ಪ್ರದೇಶದಲ್ಲಿ ಪರಿಣಾಮ ಬೀರಿ ರಾಯಚೂರು ಪ್ರದೇಶದಲ್ಲಿ ಕೂಡ ಸಾಮಾಜಿಕ ಚಳವಳಿಗಳು ಹುಟ್ಟಿಕೊಂಡವು. ಈ ಚಳವಳಿಗಳ ಹುಟ್ಟಿ ನಿಂದ ಇಲ್ಲಿ ಹಲವಾರು ಬದಲಾವಣೆಗಳು ಈ ಪ್ರದೇಶದಲ್ಲಿ ಕಂಡುಬಂದವು ಎಂದು ಹೇಳಬಹುದು (ಸಂದರ್ಶನ : ದಾನಪ್ಪ ಸಿ., ೧೪.೦೩.೨೦೦೭).

ಸಮಾಜದ ಸರ್ವತೋಮುಖ ಅಭಿವೃದ್ಧಿ ಕುರಿತು ಚಿಂತನೆ ಮಾಡುವಲ್ಲಿ ಸಾಮಾಜಿಕ ಚಳವಳಿಗಳ ಪಾತ್ರ ತುಂಬಾ ಮಹತ್ವದ್ದು. ಸಾಮಾಜಿಕ ಚಳವಳಿಯ ಪರಿಕಲ್ಪನೆ ಆಧುನಿಕ ಸಮಾಜದ್ದಾಗಿದ್ದರೂ ಆಧುನಿಕ ಪೂರ್ವ ಸಮಾಜವೂ ಕೂಡ ಸಾಮಾಜಿಕ ಬದಲಾವಣೆಗೆ ತನ್ನನ್ನು ಒಪ್ಪಿಕೊಂಡಿದ್ದೆ ಆಗಿತ್ತು. ಈ ಹಿನ್ನೆಲೆಯಲ್ಲಿ ನೋಡುವುದಾದರೆ ಎಲ್ಲ ಬಗೆಯ ಸಾಮುದಾಯಿಕ ನಡವಳಿಕೆಗಳು ಸಾಮಾಜಿಕ ಬದಲಾವಣೆಯನ್ನು ತರುತ್ತವೆಂಬುದು ನಿಜ. ಏಕೆಂದರೆ ಈ ಸಾಮುದಾಯಿಕ ನಡವಳಿಕೆಗಳು ಜನರ ದೃಷ್ಟಿಕೋನವನ್ನು ಬದಲಿಸುತ್ತವೆ.[೩]

೧೯೭೦ರ ಸುಮಾರಿಗೆ ಪಾಶ್ಚಿಮಾತ್ಯ ದೇಶದ ಕೆಲವು ಚಿಂತಕರು ಸಾಮಾಜಿಕ ಚಳವಳಿಗಳ ಅಧ್ಯಯನವನ್ನು ಸಂಪೂರ್ಣವಾದ ಭಿನ್ನ ದೃಷ್ಟಿಕೋನದೊಂದಿಗೆ ವಿಶ್ಲೇಷಿಸಲಾರಂಭಿಸಿದರು. ಚಳವಳಿಗಳನ್ನು ಸಾಮಾಜಿಕ ಬದಲಾವಣೆಯ ನೆಲೆಯಿಂದ ಗ್ರಹಿಸತೊಡಗಿದ ಈ ಅಧ್ಯಯನಗಳ ಗಮನ ೧೯೬೦ರ ದಶಕದ ಕೊನೆಯಲ್ಲಿ ಹುಟ್ಟಿಕೊಂಡ ಸ್ತ್ರೀ, ದಲಿತ, ಕಾರ್ಮಿಕ ಮತ್ತು ವಿದ್ಯಾರ್ಥಿ ಚಳವಳಿಗಳ

ವಿಶ್ಲೇಷಣೆಯ ಕಡೆಗಿದ್ದು, ಚಳವಳಿಗಳು ಜನತೆಯಲ್ಲಿರುವ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯ ಕುರಿತ ಜನರ ಅತೃಪ್ತಿಯ ಕಾರಣದಿಂದಾಗಿ ಹುಟ್ಟಿಕೊಳ್ಳುತ್ತದೆ ಎಂದು ಹೇಳಬಹುದು.

ಚಳವಳಿಗಳಲ್ಲಿ ಸ್ವತಃ ಗುರುತಿಸಿಕೊಂಡಿದ್ದ ಹಲವರು ತೊಡಗಿಕೊಂಡಿದ್ದು ಈ ಚಳವಳಿಗಳ ವೈಶಿಷ್ಟತೆಯನ್ನು ರೂಪಿಸಿತು. ಹಾಗಾಗಿ ಈ ದೃಷ್ಟಿಕೋನವು ಚಳವಳಿಗಳ ಸೈದ್ಧಾಂತಿಕ ಹಾಗೂ ಸಮಾಜೋ, ಸಾಂಸ್ಕೃತಿಕ ಅಂಶಗಳ ಕಡೆ ಹೆಚ್ಚು ಗಮನ ಹರಿಸಿತು. ಸಾಮಾಜಿಕ ಚಳವಳಿಗಳ ಹಿಂದೆ ಮಧ್ಯಮ ವರ್ಗದ ಬೆಂಬಲಕ್ಕಿಂತ ಭಿನ್ನವಾದ ಜನಾಂಗ, ಲಿಂಗ, ಜಾತಿ ಇತ್ಯಾದಿ ಅಂಶಗಳು ಪ್ರಭಾವಿಯಾಗಿರುವುದನ್ನು ಗುರುತಿಸುತ್ತ ಸಾಂಸ್ಕೃತಿಕ ರಾಜಕಾರಣದ ವಿಶ್ಲೇಷಣಾ ಮಾದರಿಯನ್ನು ಇವು ಎತ್ತಿ ಹಿಡಿದವು. ಹೀಗೆ ಸಾಮಾಜಿಕ ಚಳವಳಿಗಳ ಲಕ್ಷ್ಯದಲ್ಲಿಟ್ಟುಕೊಂಡು ವಿಭಿನ್ನ ದೃಷ್ಟಿಕೋನಗಳಿಂದ ನಡೆಯುತ್ತ ಬಂದಿರುವ ಈ ಸಾಮಾಜಿಕ ಚಳವಳಿಗಳು ಕೆಲವು ಪ್ರಮುಖ ಅಂಶಗಳನ್ನು ಒಳಗೊಂಡಿದೆ.

ಅ. "ಸಮಾಜದಲ್ಲಿ ಹುಟ್ಟಿಕೊಳ್ಳುವ ಅತೃಪ್ತಿ ಕಾರಣದಿಂದ ಹಿಂದುಳಿದ ಪ್ರದೇಶದಲ್ಲಿ ಚಳವಳಿಗಳು ಏರ್ಪಡುತ್ತವೆ.

ಉ. ಸಾಮಾಜಿಕ ಚಳವಳಿ ನಿಶ್ಚಿತ ವಿಷಯದೊಂದಿಗೆ ಭಿನ್ನಾಭಿಪ್ರಾಯ ಹೊಂದಿದ ಜನಸಮೂಹವನ್ನು ಒಂದೆಡೆ ಸೇರಿಸುತ್ತದೆ.

ಕ. ಆರ್ಥಿಕ ಚಳವಳಿಗಳು ವ್ಯಕ್ತಿತ್ವದ ಸಮಾಜ ಅಂದರೆ ಸಾಂಸ್ಕೃತಿಕ, ರಾಜಕೀಯ, ಆರ್ಥಿಕ ಜೊತೆಗೆ ಸಾಮಾಜಿಕ ಬದಲಾವಣೆಗಳ ಪ್ರವಹಿಸುವಿಕೆಯ ವಾಹಕವಾಗಿರುತ್ತವೆ (ಉಷಾ, ೨೦೦೪ : ೧೫).

೧೯೧೫-೧೬ರ ಸುಮಾರಿಗೆ ಕರ್ನಾಟಕದಲ್ಲಿ ಮುಂದುವರಿದ ಸಂಖ್ಯೆಯಲ್ಲಿ ಬಲಾಢ್ಯರಾದ ಒಕ್ಕಲಿಗ ಮತ್ತು ಲಿಂಗಾಯಿತ ಜಾತಿಗಳ ಮುಖಂಡರು ಬ್ರಾಹ್ಮಣ ವಿರೋಧಿ ಚಳವಳಿಯನ್ನು ಹುಟ್ಟು ಹಾಕಿದರೆಂದು ಹೇಳಿದರೆ ತಪ್ಪಗಲಾರದು. ಕೆಲವೇ ಸ್ವಲ್ಪ ಜನಸಂಖ್ಯೆ ಅಥವಾ ಅಲ್ಪ ಸಂಖ್ಯಾತರಾದ ಬ್ರಾಹ್ಮಣರು ಹೆಚ್ಚಿನ ಉದ್ಯೋಗವನ್ನು ಪಡೆಯುವುದನ್ನು ತಪ್ಪಿಸುವುದರ ಸಲುವಾಗಿ ಮೈಸೂರು ಅರಸು ಸಂಸ್ಥಾನದ ಒಡೆಯರು ಹಿಂದುಳಿದ ದಲಿತ ಮತ್ತು ಸಾಮಾಜಿಕ ತುಳಿತಕ್ಕೆ ಒಳಗಾದ ಜನತೆಯನ್ನು ಮೇಲೆತ್ತುವ ದೃಷ್ಟಿಯಿಂದ ಮಿಲ್ಲರ್ ಆಯೋಗವನ್ನು ನೇಮಿಸಿದರು. ಇದರಿಂದ ರಾಜ್ಯದಲ್ಲಿ ರೈತರು, ಗೇಣಿದಾರರು ಕಾರ್ಮಿಕರು, ಸಮಾಜದ ಪ್ರಬಲವರ್ಗಗಳಿಂದ ತುಳಿತಕ್ಕೆ ಅಥವಾ ಶೋಷಣೆಗೆ ಒಳಗಾದ ವರ್ಗಗಳು ಬ್ರಾಹ್ಮಣ ಹಾಗೂ ಒಕ್ಕಲಿಗರ ಮತ್ತು ಭೂಮಾಲಿಕರ ವಿರುದ್ಧ ತಮ್ಮ ನ್ಯಾಯಬದ್ಧ ಹಕ್ಕುಗಳಿಗಾಗಿ ಹೋರಾಟಕ್ಕಿಳಿದರು (ಚಾಂಡಾಳ, ೧೯೯೨: ೧೬).

ಮೈಸೂರು ಭಾಗದಲ್ಲಿ ನಡೆದ ಈ ಹೋರಾಟಗಳ ಪರಿಣಾಮವು ಹೈದರಾಬಾದ್ ಕರ್ನಾಟಕದ ರಾಯಚೂರು ಪ್ರದೇಶದ ಮೇಲೆ ಪರಿಣಾಮ ಬೀರಿತು. ಹೀಗಾಗಿ ಜನತೆಗೆ ಹೋರಾಟದ ಮನೋಭಾವ ಬೆಳೆದು ಚಳವಳಿಗಳು ಪ್ರಾರಂಭವಾದವು.

ರಾಯಚೂರು ಜಿಲ್ಲೆಯೊಳಗೆ ಚಳವಳಿಯ ಸ್ವರೂಪ ಐತಿಹಾಸಿಕವಾಗಿ ಪ್ರಪ್ರಥಮವಾಗಿ ಪ್ರಾರಂಭವಾಗಿದ್ದು ನಿಜಾಮ್‌ಶಾಹಿ ವಿರುದ್ಧ. ಈ ಹೋರಾಟದ ನಾಯಕತ್ವವನ್ನು ಸ್ವಾಮಿ ರಮಾನಂದ ತೀರ್ಥರ ನೇತೃತ್ವದಲ್ಲಿ ಅವರ ಬೆಂಬಲಗರಾಗಿ ಕುರುಡಿ ಭೀಮಜ್ಜ, ಪುಂಡಲೀಕಪ್ಪ, ಜ್ಞಾನಮೂರ್ತಿ, ನಾಗಪ್ಪ, ರಾಘುಜೋಶಿ, ಸರಾಳ ಮುಂತಾದವರು ಭಾಗವಹಿಸಿದ್ದರು.

## ದಲಿತ ಚಳವಳಿ

ದಲಿತ ಎಂಬುದು ಜಾತಿಯಲ್ಲ; ಸಮಾಜದ ತಳವರ್ಗದ ಹೋರಾಟ, ನೋವು, ಅಪಮಾನ, ದಾರಿದ್ರ್ಯ, ಅನುಭವಗಳ ವಾಸ್ತವ. ಸ್ವಾತಂತ್ರ್ಯಪೂರ್ವದಲ್ಲಿ, ಸ್ವಾತಂತ್ರ್ಯ ನಂತರದಲ್ಲಿ ಅಂಬೇಡ್ಕರ್ ನಡೆಸಿದ ಹೋರಾಟವು ಕರ್ನಾಟಕ ದಲಿತ ಚಳವಳಿಗೆ ತಳಹದಿಯಾಯಿತು. ಪರಿಣಾಮವಾಗಿ ಅಸ್ಪೃಶ್ಯರು ತಮ್ಮ ಹಕ್ಕನ್ನು ಪಡೆಯಲು ಚಳವಳಿಗೆ ಇಳಿದರು.

ಎಡಪಂಥೀಯ ವಿಚಾರದೊಂದಿಗೆ ಮಾರ್ಕ್ಸ್‌ವಾದ ಪ್ರೇರಣೆಯೊಂದಿಗೆ ಇಲ್ಲಿ ಪ್ರಮುಖವಾಗಿ ದಲಿತ ಸಂಘರ್ಷ ಸಮಿತಿ ಹುಟ್ಟಿಕೊಂಡಿತು. ಇದರ ಜೊತೆಗೆ ಕಾರ್ಮಿಕ, ರೈತ, ಮಹಿಳಾ ಹೀಗೆ ಮುಂತಾದ ಚಳವಳಿಗಳು ಹುಟ್ಟಿಕೊಂಡವು. ಮುಂದೆ ಈ ಸಾಮಾಜಿಕ ಚಳವಳಿಗಳ ಬೆಳವಣಿಗೆ ರಾಯಚೂರು ಪ್ರದೇಶದಲ್ಲಿ ಒಂದು ಹೊಸ ವಿಚಾರವನ್ನು ನೀಡಿದವು ಅಥವಾ ತೋರಿಸಿದವು, ಜನರ ಮನವರಿಕೆಗೆ ಒಂದು ದಾರಿದೀಪವಾದವು ಎಂದು ಹೇಳಬಹುದು.

೧೯೭೦ರ ದಶಕದಲ್ಲಿ ರಾಯಚೂರು ಪ್ರದೇಶದಲ್ಲಿ ಭಾಗ್ಯವಂತ (ಗಂಗಾವತಿ) ಶಿವಪುತ್ರರವರು, ದಲಿತರು ಅಲ್ಲದಿದ್ದರೂ, ದಲಿತೇತರರಾದ ಗಂಗಾಧರ ಕುಷ್ಟಗಿಯವರು ದಲಿತ ಸಂಘರ್ಷ ಸಮಿತಿ ಹುಟ್ಟು ಹಾಕಲು ಕಾರಣಕರ್ತರಾದರು. ಇದು ಮುಂದೆ ಈ ಪ್ರದೇಶದಲ್ಲಿ ಬಿ.ಕೃಷ್ಣಪ್ಪನವರ[೪] ನೇತೃತ್ವ ದಲ್ಲಿ ವೆಂಕಟೇಶ, ಈರಣ್ಣ ಮತ್ತು ಸಿ.ದಾನಪ್ಪ, ಮಾನಸಯ್ಯ, ಭೀಮಣ್ಣ, ಎಸ್.ಮಾರೆಪ್ಪ, ಉರುಕುಂದಪ್ಪ, ಬಸವರಾಜ, ಹನುಮದಾಸ್ ಮುಂತಾದವರ ಜೊತೆಗೆ ಸಾಹಿತಿಗಳಾದ ಜಂಬಣ್ಣ ಅಮರಚಿಂತ, ಚೆನ್ನಣ್ಣ ವಾಲೀಕಾರ, ಮಾಸ್ಟರ್ ಭಂಡಾರಿಗಲ್, ಮಾಸ್ಟರ್ ಕರಿಯಪ್ಪ, ಬಸವರಾಜ ಕಾಡ್ ಪ್ರಮುಖರು. ಆದರೆ ಇಲ್ಲಿ ದಲಿತರ ಪರವಾಗಿ ನಿಂತವರು ಎಂದರೆ, ಸಿ.ದಾನಪ್ಪ - ಮಾನಸಯ್ಯ, ಎಮ್.ವಿರುಪಾಕ್ಷಿ, ಎಸ್.ಮಾರೆಪ್ಪ ಇನ್ನೂ ಮುಂತಾದವರು. ರಾಯಚೂರು ಪ್ರದೇಶದಲ್ಲಿ ಇಂದಿಗೂ ಕೂಡ ಗಟ್ಟಿಯಾಗಿ ನೆಲೆ ನಿಲ್ಲಲು ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರು ಕಾರಣರಾಗಿದ್ದಾರೆ (ಸಂದರ್ಶನ : ದಾನಪ್ಪ ಸಿ., ೧೪.೦೩.೨೦೦೭).

ಈ ಸಾಮಾಜಿಕ ಚಳವಳಿಗಳಲ್ಲಿ ರಾಯಚೂರು ಪ್ರದೇಶದಲ್ಲಿ ದಲಿತ ಸಂಘರ್ಷ ಸಮಿತಿಯು ಹಲವಾರು ಶೋಷಣೆಗೆ ಒಳಗಾದ ದಲಿತರ ನೋವುಗಳಿಗೆ ನಿಂತ ಈ ಸಮಿತಿಯು ಹಲವಾರು ಚಳವಳಿಗಳನ್ನು ಹುಟ್ಟಿಸಿದ್ದಲ್ಲದೇ ಅದರ ಬೆಳವಣಿಗೆಯಿಂದಾಗಿ ಈ ಪ್ರದೇಶದಲ್ಲಿ ದಲಿತ ಸಂಘರ್ಷ ಸಮಿತಿಯು ತನ್ನದೇಯಾದ ಹೋರಾಟಗಳನ್ನು ಮಾಡಿದೆ. 'ದಲಿತರ ನೋವು, ಅಸ್ಪೃಶ್ಯತೆ ನಿವಾರಣೆಗಾಗಿ

ಹೋರಾಟ, ಯುದ್ಧ, ಚಳವಳಿ, ಗಾಂಧೀಜಿಯ ಹರಿಜನೋದ್ಧಾರ ಹೀಗೆ ಅನೇಕ ಸಂಗತಿಗಳು ದಲಿತರ ಮೇರೆ ಪ್ರಭಾವಿಸಿರುವುದುಂಟು.

ದಲಿತ ಚಳವಳಿಯಲ್ಲಿ ದಲಿತ ಸಂಘರ್ಷ ಸಮಿತಿಯ ಪಾತ್ರ ತುಂಬಾ ಪರಿಣಾಮಕಾರಿಯಾಗಿದೆ. ಆದರೆ ಈ ಸಮಿತಿಯು ಚಳವಳಿಯ ಆರಂಭಿಕ ಹಂತದಿಂದ ಇಲ್ಲಿಯವರೆಗಿನ ಬೆಳವಣಿಗೆಯನ್ನು ಗಮನಿಸಿದರೆ ದಲಿತ ಸಂಘರ್ಷ ಸಮಿತಿಯ ಪಾತ್ರ ಹಲವಾರು ರೀತಿಯಲ್ಲಿ ಪ್ರಮುಖ ಪಾತ್ರ ವಹಿಸಿದೆ.

ಚಳವಳಿಯ ಆರಂಭಿಕ ಹಂತದಲ್ಲಿ ಪ್ರಕರಣದ ಆಧಾರದ ಮೇಲೆ, ಭಾವನಾತ್ಮಕವಾಗಿ ಜನರನ್ನು ಸಂಘಟಿಸಿ ಹೋರಾಟಕ್ಕೆ ಇಳಿಸಲಾಯಿತು. ಅದು ದಲಿತರ ಮೇಲೆ ನಡೆದ ಹಲ್ಲೆ, ದೌರ್ಜನ್ಯ, ಕೊಲೆ, ಮಾನಭಂಗ ಮತ್ತು ಬಹಿಷ್ಕಾರ ಮುಂತಾದವುಗಳಿಗೆ ಪ್ರತಿಭಟನೆ ರೂಪದಲ್ಲಿ ಚಳವಳಿಯ ಕಾರ್ಯಕ್ರಮಗಳನ್ನು ರೂಪಿಸುತ್ತಿತ್ತು. ಅಂತಹ ಕಾರ್ಯಕ್ರಮಗಳು ಪ್ರತಿಭಟನೆ, ಪ್ರತಿಭಟನಾ ಮೆರವಣಿಗೆ, ಬಹಿರಂಗ ಸಭೆ, ಧರಣಿ ಸತ್ಯಾಗ್ರಹ, ಸಮಾವೇಶ ಮತ್ತು ಜಾಥಾ ಮುಂತಾದವುಗಳ ರೂಪದಲ್ಲಿ ನಡೆಯುತ್ತಿದ್ದವು (ಸಂದರ್ಶನ : ದಾನಪ್ಪ ಸಿ., ೧೪.೦೩.೨೦೦೭).

ದಲಿತರ ಮೇಲೆ ನಡೆಯುತ್ತಿರುವ ಶೋಷಣೆಯ ನಾನಾ ರೂಪಗಳನ್ನು ಚಳವಳಿಯು ಮನವರಿಕೆ ಮಾಡಿದೆ. ರಾಯಚೂರು ಪ್ರದೇಶದಲ್ಲಿ ದಲಿತ ಸಮಸ್ಯೆ ಎಂಬುದು ಕೇವಲ ಜಾತಿಯ ಪರಿಧಿಗೆ ಸೀಮಿತವಾಗಿಲ್ಲ. ಅದರ ಹಿಂದೆ ಬಲವಾದ ಆರ್ಥಿಕ ಆಯಾಮವಿದೆ. ಈ ನಿಟ್ಟಿನಲ್ಲಿ ಅಧ್ಯಯನ ಕಾರ್ಯಕ್ರಮಗಳಿಲ್ಲ. ಚಳವಳಿಯ ವಿಚಾರಗಳನ್ನು ಕೌಟುಂಬಿಕ ನೆಲೆಗೆ ಕೊಂಡೊಯ್ಯುವ ಅಗತ್ಯತೆ ಮತ್ತು ಅನಿವಾರ್ಯತೆಗಳನ್ನು ಮನಗಂಡಿಲ್ಲ. ಇದಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳಿಲ್ಲ. ಹಳ್ಳಿಗಳಲ್ಲಿ ಜಮೀನ್ದಾರಿ ಶೋಷಣೆಯಲ್ಲಿ ಜಮೀನ್ದಾರಿ ವರ್ಗವೇ ಪ್ರಬಲವಾಗಿದೆ. ಇಂತಹ ಪರಿಸ್ಥಿತಿಯ ರಾಯಚೂರು ಪ್ರದೇಶದಲ್ಲಿ ಈ ಸಾಮಾಜಿಕ ಚಳವಳಿಯು ಮುಖ್ಯವಾಗಿ ದಲಿತರ ಸಮಸ್ಯೆಗೆ ಮೂಲಪರಿಹಾರವಾಗಿದೆ (ಸಂದರ್ಶನ : ದಾನಪ್ಪ ಸಿ., ೧೪.೦೩.೨೦೦೭).

ರಾಯಚೂರು ಪ್ರದೇಶದಲ್ಲಿ ದಲಿತರ ಪರಿಸ್ಥಿತಿ ಇರುವುದು ಹಳ್ಳಿಗಳಲ್ಲಿ. ಮೊದಲಿಗೇ ಎದುರಾಗುವುದು ಜಮೀನಿನ ಸಂಬಂಧ. ಇಲ್ಲಿ ಎದುರಾಗುವವರು ಭೂಮಾಲೀಕರು. ಆದರೆ ದಲಿತ ಚಳವಳಿ ಮುಖ್ಯವಾಗಿ ಪುರೋಹಿತಶಾಹಿ, ಬ್ರಾಹ್ಮಣಶಾಹಿ ಮತ್ತು ಜಮೀನ್ದಾರಿ ಪದ್ಧತಿಯ ವಿರುದ್ಧ ಈ ಪ್ರದೇಶದಲ್ಲಿ ಚಳವಳಿ ನಡೆಸಿದೆ. ಇವುಗಳ ಬೆಳವಣಿಗೆ ತೀವ್ರಗೊಂಡು ಇದರ ಪರಿಣಾಮವಾಗಿ ನಾವು ಮೆದಕಿನಾಳ ಮತ್ತು ಗೆಜ್ಜಲಗಟ್ಟ ಭೂಹೋರಾಟದಲ್ಲಿ ದಲಿತ ಸಂಘರ್ಷ ಸಮಿತಿ ಯಶಸ್ಸನ್ನು ಪಡೆದಿದೆ. ರಾಯಚೂರು ಪ್ರದೇಶದಲ್ಲಿ ಪ್ರಮುಖ ಹೋರಾಟ ಮತ್ತು ಭೂಹೋರಾಟಗಳನ್ನು ಕಾಣಬಹುದು.

ಇದರ ಜೊತೆಗೆ ದೇವದಾಸಿ ಪದ್ಧತಿ, ಮಲಹೊರುವ ಪದ್ಧತಿ, ದೇವಸ್ಥಾನದ ಬಹಿಷ್ಕಾರ ಮತ್ತು ಹೋಟೆಲ್‌ಗಳಲ್ಲಿ ನಿರಾಕರಣೆ ಇಂತವುಗಳ ವಿರುದ್ಧ ದಲಿತ ಸಂಘರ್ಷ ಸಮಿತಿ ಚಳವಳಿಗಳನ್ನು ನಾವು ಈ ಪ್ರದೇಶದಲ್ಲಿ ಕಾಣುತ್ತೇವೆ (ಸಂದರ್ಶನ : ದಾನಪ್ಪ ಸಿ., ೧೪.೦೩.೨೦೦೭).

## ಕಾರ್ಮಿಕ ಚಳವಳಿ

ಭಾರತದ ಜನಜೀವನದಲ್ಲಿ ಹಾಸುಹೊಕ್ಕಾಗಿರುವ ಕೈಗಾರಿಕೋದ್ಯಮದ ಒಂದು ಮುಖ ಕಾರ್ಮಿಕ ಚಳವಳಿ. ಸಾಮಾನ್ಯವಾಗಿ ಕಾರ್ಮಿಕರ ಚಳವಳಿಯನ್ನು ಕಾರ್ಮಿಕರ ಸಂಘ ಎಂದು ಕರೆಯುತ್ತಾರೆ. ಕೈಗಾರಿಕೆಗಳಲ್ಲಿ ದುಡಿಯುವ ಕಾರ್ಮಿಕರು ತಮ್ಮ ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳಲು, ಆರ್ಥಿಕವಾಗಿ, ಸಾಮಾಜಿಕವಾಗಿ ಕಲ್ಯಾಣ ಹೊಂದಲು ಸಂಘಗಳನ್ನು ರಕ್ಷಿಸಿಕೊಳ್ಳುತ್ತಾರೆ. ಇಂತಹ ಪ್ರೇರಕವಾದ ಅಂಶಗಳು ರಾಯಚೂರು ಪ್ರದೇಶದಲ್ಲಿ ಕಾರ್ಮಿಕರ ಮೇಲೆ ಪ್ರಭಾವ ಬೀರಿವೆ. ಕಾರ್ಮಿಕರು ತಮ್ಮ ನೋವುಗಳ ಪರಿಹಾರಕ್ಕಾಗಿ ಕಾರ್ಮಿಕರ ಸಂಘಗಳನ್ನು ಕಟ್ಟಿಕೊಂಡರು.

ರಾಯಚೂರು ಪ್ರದೇಶದ ಸಾಮಾಜಿಕ ಚಳವಳಿಗಳಲ್ಲಿ ಕಾರ್ಮಿಕ ಚಳವಳಿಯ ಹುಟ್ಟು ಮತ್ತು ಬೆಳವಣಿಗೆಯೂ ಕೂಡ ಪ್ರಮುಖವಾಗಿದೆ. ಹಟ್ಟಿ ಚಿನ್ನದ ಗಣಿ ಮತ್ತು ಹತ್ತಿ ಗಿರಣಿ ಜೊತೆಗೆ, ಶಕ್ತಿನಗರ ಉಷ್ಣವಿದ್ಯುತ್ ಕೇಂದ್ರದಲ್ಲಿ ಕಾರ್ಮಿಕ ಚಳವಳಿ ಹುಟ್ಟು ಬೆಳವಣಿಗೆಯು ರಾಯಚೂರು ಪ್ರದೇಶದ ಮೇಲೆ ತುಂಬಾ ಪ್ರಭಾವ ಬೀರಿದ ಸಾಮಾಜಿಕ ಚಳವಳಿ.

ರಾಯಚೂರಿನ ಪ್ರದೇಶದ ಶಕ್ತಿನಗರ ಪ್ರದೇಶದಲ್ಲಿದ್ದ ಉಷ್ಣವಿದ್ಯುತ್ ಕೇಂದ್ರದಲ್ಲಿ ಇಲ್ಲಿನ ಜನರಿಗೆ ಉದ್ಯೋಗ ನೀಡದೇ ದೂರದ ಬೆಂಗಳೂರು ಪ್ರದೇಶದ ಜನರಿಗೆ ಉದ್ಯೋಗ ನೀಡಿದ್ದರು. ಈ ಪ್ರದೇಶದ ಕಾರ್ಮಿಕರಿಗೆ ಅನ್ಯಾಯ ಮಾಡಿದ್ದರು. ಸರೋಜಿನಿ ಮಹಿಷಿ ವರದಿಯ ಪ್ರಕಾರ ಸ್ಥಳೀಯರಿಗೆ ಶೇಕಡಾ ೬೪ರಷ್ಟು ಮೀಸಲಾತಿ ಪ್ರತಿಶತ ಕೊಡಬೇಕು ಎಂಬ ನಿಯಮವಿದ್ದರೂ ಕೂಡ ಇಲ್ಲಿ ನಮ್ಮ ಜನರಿಗೆ ಉದ್ಯೋಗ ಇರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ರಾಘವೇಂದ್ರ ಕುಷ್ಟಗಿಯವರ ನೇತೃತ್ವದಲ್ಲಿ ಕಾರ್ಮಿಕ ಚಳವಳಿ ಹುಟ್ಟಿಕೊಂಡಿತು (ಸಂದರ್ಶನ : ರಾಘವೇಂದ್ರ ಕುಷ್ಟಗಿ, ೨೮.೦೨.೨೦೦೭). ಈ ಚಳವಳಿಯ ಬೆಳವಣಿಗೆ ತೀವ್ರಗತಿಯಲ್ಲಿ ನಡೆಯಿತು. ಈ ಚಳವಳಿ ಜಿಲ್ಲಾ ನಿರುದ್ಯೋಗ ಯುವಜನ ಸಮಿತಿ ಮತ್ತು ಅಖಿಲ ಭಾರತ ವಿದ್ಯಾರ್ಥಿ ಒಕ್ಕೂಟ ಜೊತೆಗೂಡಿ ನಡೆಸಿದ ಹೋರಾಟದ ಪರಿಣಾಮವಾಗಿ ಇಲ್ಲಿನ ಜನರಿಗೆ ಉದ್ಯೋಗ ದೊರಕುವಂತಾಯಿತು.

ಅದೇ ರೀತಿ ಪುರುಷೋತ್ತಮ ಕಲಾಬಂಡಿಯ ನೇತೃತ್ವದಲ್ಲಿ ಸ್ಪಿನ್ನಿಂಗ್ ಮಿಲ್ ಕಾರ್ಮಿಕ ಚಳವಳಿಯು ತೀವ್ರಗೊಂಡಿತು. ಅಲ್ಲಿನ ಕಾರ್ಮಿಕರ ಸಮಸ್ಯೆಗಳಿಗೆ ಯಾರೂ ಸ್ಪಂದಿಸುತ್ತಿರಲಿಲ್ಲ. ಇಂತಹ ಸಮಸ್ಯೆಗಳಿಗೆ ನಾಯಕತ್ವ ನೀಡಿದ ಪುರುಷೋತ್ತಮ ಕಲಾಲಬಂಡಿಯವರು ಕಾರ್ಮಿಕರ ಸಮಸ್ಯೆಗಳಿಗೆ ನಾಯಕತ್ವ ವಹಿಸಿ ಚಳವಳಿ ಹುಟ್ಟಲು ಕಾರಣಕರ್ತರಾದರು. ಈ ಚಳವಳಿಯ ಬೆಳವಣಿಗೆಯ ಪರಿಣಾಮವಾಗಿ ಈ ಸ್ಪಿನ್ನಿಂಗ್ ಮಿಲ್‌ನ ಕಾರ್ಮಿಕರ ಸಮಸ್ಯೆಗಳು ಒಮ್ಮೆ ಪರಿಹಾರ ಪಡೆಯುತ್ತಿದ್ದವು. ಒಮ್ಮೊಮ್ಮೆ ಸಮಸ್ಯೆಗಳು ಉದ್ಭವವಾಗುತ್ತಿದ್ದವು. ಈ ಕಾರ್ಮಿಕರ ಸಮಸ್ಯೆಗಳಿಗೆ ಯಾವುದೇ ರೀತಿಯ ಸ್ಪಂದನೆ ಇರಲಿಲ್ಲ. ಈ ರೀತಿಯ ಬೆಳವಣಿಗೆಯಿಂದಾಗಿ ಕೊನೆಗೂ ಸ್ಪಿನಿಂಗ್ ಮಿಲ್ ಮುಚ್ಚಿಕೊಂಡಿತು.

ಅದೇ ರೀತಿ ಹಟ್ಟಿ ಚಿನ್ನದಗಣಿಯ ಕಾರ್ಮಿಕರ ಚಳವಳಿಗೆ ಇಂದಿಗೂ ಮಹತ್ವವಿದೆ. ಏಕೆಂದರೆ ಬಂಡವಾಳಶಾಹಿಗಳು ಇಲ್ಲಿನ ಕಾರ್ಮಿಕರನ್ನು ಗುಲಾಮರಂತೆ ಕಂಡಿದ್ದಾರೆ (ಸಂದರ್ಶನ : ಮಹಮದ್ ಮೌಲಾ, ೨೦.೦೨.೨೦೦೭). ಗಣಿಯಲ್ಲಿ ಬಂದಂತಹ ಲಾಭವನ್ನು ಸರ್ಕಾರ ಮತ್ತು ಬಂಡವಾಳಶಾಹಿಗಳು ಹಂಚಿಕೊಳ್ಳುತ್ತಾರೆ. ಇದರ ವಿರುದ್ಧ ಮೌಲರ ನಾಯಕತ್ವದ ಅಡಿಯಲ್ಲಿ ಕಾರ್ಮಿಕ ಚಳವಳಿ ಹುಟ್ಟಿಕೊಂಡಿದ್ದು ಅದರ ಬೆಳವಣಿಗೆ ಇಂದಿಗೂ ಇದೆ. ಈ ಕಾರ್ಮಿಕರ ಸಮಸ್ಯೆಗಳಿಗೆ ಯಾರು ಸ್ಪಂದಿಸುವಂತಿಲ್ಲ. ಆದುದರಿಂದ ಹಟ್ಟಿ ಚಿನ್ನದ ಗಣಿಯ ಕಾರ್ಮಿಕರು ತಮ್ಮ ಸಮಸ್ಯೆಗಳನ್ನು ಚಳವಳಿಗಳ ಮುಖಾಂತರ ಬೆಳವಣಿಗೆ ಕಂಡಿರುವುದನ್ನು ನಾವು ಇಂದಿಗೂ ಕಾಣಬಹುದು.

**ಸಮುದಾಯ ಚಳವಳಿ**

ರಾಯಚೂರು ಪ್ರದೇಶದಲ್ಲಿ ಸಾಮಾಜಿಕ ಚಳವಳಿಗಳಲ್ಲಿ ಬೀದಿನಾಟಕದ ಪಾತ್ರ ತುಂಬಾ ಮಹತ್ವದ್ದಾಗಿದೆ. ಕರ್ನಾಟಕ ಸಾಂಸ್ಕೃತಿಕ ರಂಗದಲ್ಲಿ ಸಮುದಾಯ ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ನೀಡುತ್ತಾ ಬಂದಿರುವುದು ಕಾಣಬಹುದು. ಅದರಂತೆ ನಮ್ಮ ಈ ಪ್ರದೇಶದಲ್ಲಿ ಬೀದಿನಾಟಕ ಪ್ರಮುಖ ಪಾತ್ರ ವಹಿಸಿದೆ. 'ಕಲೆಗಾಗಿ ಕಲೆ' ಎನ್ನುವ ಸಾಂಪ್ರದಾಯಿಕ ನಂಬಿಕೆಯನ್ನು ತಿರಸ್ಕರಿಸುತ್ತ 'ಬದುಕಿಗಾಗಿ ಕಲೆ' ಎನ್ನುವ ಉದ್ದೇಶದೊಂದಿಗೆ ಜನಪರವಾದ ಕಾಳಜಿಯ ಆಶಯ ಹೊಂದಿದ ಸಮುದಾಯ ಸಂಘಟನೆ ಈ ಕಲೆಯನ್ನು ಸಾಮೂಹಿಕವಾಗಿ ಸಾಂಸ್ಕೃತಿಕ ಮಾಧ್ಯಮವನ್ನಾಗಿಸಿದೆ. ದೀನದಲಿತರ ಮತ್ತು ಎಲ್ಲ ಸೌಲಭ್ಯಗಳಿಂದ ವಂಚಿತರಾದ ಶೋಷಿತ ಜನತೆಯ ನೋವುಗಳೊಂದಿಗೆ ಸ್ಪಂದಿಸಿ, ಸಮಾಜದಲ್ಲಿನ ಮೌಢ್ಯತೆ, ಅಸಮಾನತೆ, ಜೀವ ವಿರೋಧಿ ಮೌಲ್ಯಗಳನ್ನು ಗಾಢವಾಗಿ ಪ್ರತಿಭಟಿಸಿದೆ. ಪ್ರಗತಿಪರ ವೈಚಾರಿಕತೆಯನ್ನು ಬೆಳೆಸುವಲ್ಲಿ ತನ್ನ ದಿಟ್ಟ ನಿಲುವುಗಳೊಂದಿಗೆ ಎಲ್ಲಾ ಏಳು-ಬೀಳುಗಳನ್ನು ಕಂಡವರು ಈ ಬೀದಿನಾಟಕ ಮುಖಾಂತರ ಜನರ ನೇರವಾದ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಮುಖ್ಯ ಪಾತ್ರವನ್ನು ವಹಿಸಿದೆ ಎಂದು ಹೇಳಬಹುದು (ಸಂದರ್ಶನ : ವಿಶ್ವನಾಥ್ ಎಸ್., ೨೪.೦೨.೨೦೦೭).

ಹಿಂದುಳಿದ ಜಿಲ್ಲೆಯೆಂದೇ ಹೆಸರಾದ ರಾಯಚೂರಿನ ಸಮುದಾಯ ಘಟಕವು ಕಳೆದ ಎರಡು ದಶಕಗಳಲ್ಲಿ ಸಕ್ರಿಯವಾಗಿ ಸುಮಾರು ೨೦ಕ್ಕೂ ಹೆಚ್ಚು ರಂಗ ಹಾಗೂ ಬೀದಿನಾಟಕಗಳನ್ನು ಆಡಿದೆ. ವಿಶ್ವಶಾಂತಿ, ರೈತರ ಸಮಸ್ಯೆಗಳು, ದಲಿತರ ಬಗ್ಗೆ ಮತ್ತು ಬರಗಾಲದ ವಿರುದ್ಧ ರಾಜ್ಯಮಟ್ಟದ ಜಾಥಗಳನ್ನು ಹಮ್ಮಿಕೊಂಡಿದೆ. ಇದರ ಮೂಲಕ ಜನಜಾಗೃತಿಯನ್ನುಂಟು ಮಾಡಿ ಸಾಂಸ್ಕೃತಿಕ ರಂಗದಲ್ಲಿ ತನ್ನದೇ ಆದ ಛಾಪು ಮೂಡಿಸಿ ಇಡೀ ಜನಸಮುದಾಯದ ಗಮನ ಸೆಳೆದದ್ದು ಈಗ ಇತಿಹಾಸ.

ಜಾಗತೀಕರಣ, ಖಾಸಗೀಕರಣ, ಕೇಸರೀಕರಣದಂತಹ ದುಷ್ಪಶಕ್ತಿಗಳು ನಮ್ಮ ಜೀವನದ ಮೌಲ್ಯಗಳನ್ನೇ ಬುಡಮೇಲುಗೊಳಿಸುವ ಪರಿಸ್ಥಿತಿ ನಿರ್ಮಾಣವಾಗುತ್ತಿರುವ ಹಿನ್ನೆಲೆಯಲ್ಲಿ ಜನತಾಂತ್ರಿಕ, ಜನಪರ ಸಂಸ್ಕೃತಿಯನ್ನು ರಕ್ಷಿಸಿ ಬೆಳೆಸುವ ಅವಶ್ಯಕತೆ ಬಹಳ ಇದೆ. ಕಳೆದೆರೆಡು ವರ್ಷಗಳಿಂದ

ಚೇತರಿಸಿಕೊಂಡ ರಾಯಚೂರು 'ಸಮುದಾಯವು' ಪುನಃ ಸಂಘಟಿತವಾಗಿ ರಂಗ ಚಟುವಟಿಕೆಯನ್ನೊಳಗೊಂಡ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಲಿದೆ (ಸಂದರ್ಶನ : ವಿಶ್ವನಾಥ್ ಎಸ್., ೨೪.೦೨.೨೦೦೭).

ರಾಯಚೂರು ಪ್ರದೇಶದಲ್ಲಿ ಸಾಮಾಜಿಕ ಚಳವಳಿಯನ್ನು ಹುಟ್ಟುಹಾಕಿದ ಈ ಸಮುದಾಯವು ನೇರವಾಗಿ ಈ ಜನರ ಮನ ಮುಟ್ಟುವಂತ ಬೀದಿನಾಟಕಗಳನ್ನು ಆಡಿದೆ. ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ವಿಷಯಗಳ ಜೊತೆಗೆ ದೀನದಲಿತರ ಬಡತನ ಶೋಷಣೆ, ವರದಕ್ಷಿಣೆ ಪಿಡುಗು, ಬಾಲ್ಯ ವಿವಾಹ ಖಂಡನೆ ಇನ್ನೂ ಮುಂತಾದ ಬೀದಿನಾಟಕಗಳಲ್ಲಿ ಸಾಮಾಜಿಕ ಸಮಸ್ಯೆಗಳ ಚಿಂತನೆ ಮಾಡುವಂತೆ ಜನರಿಗೆ ನೇರವಾದ ವಿಷಯವನ್ನು ತಲುಪಿಸುತ್ತಾರೆ.

## ಮಾದಿಗ ಚಳವಳಿ

ಕರ್ನಾಟಕದಲ್ಲಿ ಮಾದಿಗ ಸಮುದಾಯ ಈಗೀಗ ಬಲವಾಗಿ ಸಂಘಟನೆಗೊಳ್ಳುತ್ತಿದೆ. ಮಾದಿಗ ದಂಡೋರ, ಆದಿಜಾಂಬವ ಹಾಗೂ ಆದಿ ಕರ್ನಾಟಕ ಹೆಸರಿನಲ್ಲಿ ಮಾದಿಗ ಜನಾಂಗವನ್ನು ಗಮನಿಸಬಹುದು. ಭಾರತದ ಎಲ್ಲ ಪ್ರದೇಶಗಳಲ್ಲಿ ಪ್ರಮುಖವಾಗಿ ಪರಿಶಿಷ್ಟಜಾತಿಯಲ್ಲಿ ಅತಿ ಹೆಚ್ಚು ಜನರೆಂದರೆ ಮಾದಿಗರು ಮಾತ್ರ ಎಂಬ ಮಾತಿನಲ್ಲಿ ಉತ್ಪ್ರೇಕ್ಷೆಯೇನೂ ಇಲ್ಲ. ಹಾಗೆಯೇ ಕರ್ನಾಟಕದಲ್ಲಿ ಮಾದಿಗ ಜನಾಂಗದವರು ಬಹುಸಂಖ್ಯಾತರು ಎಂಬುದೂ ನಿಜ. ೧೯೬೧ರ ಜನಗಣತಿಯ ಪ್ರಕಾರ ದಕ್ಷಿಣ ಭಾರತದಲ್ಲಿ ಪರಿಶಿಷ್ಟ ಜಾತಿಯ ಜನರಲ್ಲಿ ಮಾದಿಗರ ಸಂಖ್ಯೆ ಶೇ.೫೦ರಷ್ಟು. ೧೯೭೫ರಲ್ಲಿ ಸರ್ಕಾರಕ್ಕೆ ಒಪ್ಪಿಸಲಾದ ಹಾವನೂರು ಆಯೋಗ ವರದಿ ಹೇಳುವಂತೆ ಕರ್ನಾಟಕದ ಮಾದಿಗರ ಸಂಖ್ಯೆ ೫೭.೨ರಷ್ಟು. ಒಂದು ಅಂದಾಜಿನಂತೆ ಕರ್ನಾಟಕದಲ್ಲಿರುವ ಮಾದಿಗ ಜನಾಂಗದ ಸಂಖ್ಯೆ ೮೫ ಲಕ್ಷ. ಬಹುಸಂಖ್ಯಾತರಾದ ಮಾದಿಗರಿಗೆ ತಮಗೆ ನ್ಯಾಯಯುತವಾದ ಮೀಸಲಾತಿ ದೊರೆತಿಲ್ಲವೆಂಬ ಅತೃಪ್ತಿ ಇದೆ. ಸಂವಿಧಾನದ ೧೬(೪) ಮತ್ತು ೩೩೫ನೇ ಅನುಚ್ಛೇದಗಳಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗಗಳಿಗೆ ಮೀಸಲಾತಿ ಕುರಿತ ನಿಯಮಗಳನ್ನು ಅಳವಡಿಸಲಾಗಿದ್ದರೂ, ಈ ಮೀಸಲಾತಿಯಿಂದ ಮಾದಿಗರಿಗೆ ನೌಕರಿಗಳು ದೊರೆತು ಅವರ ಸರ್ವತೋಮುಖ ಪ್ರಗತಿಯಾಗಬಹುದೆಂಬ ನಿರೀಕ್ಷೆ ಹುಸಿಯಾಗಿದೆ. ಅವರ ಇಂದಿನ ದುಸ್ಥಿತಿಯೇ ಇದಕ್ಕೆ ಸಾಕ್ಷಿ (ಮಹೇಶ್, ೨೦೦೨: ೭೪). ತಮ್ಮ ಹೆಸರಿನಲ್ಲಿ 'ಬಲಗೈ'ನವರು ಪಡೆದುಕೊಳ್ಳುತ್ತಿದ್ದಾರೆಂಬುದು ಅವರ ಆರೋಪ. ಅವರ ಈ ಹೋರಾಟಕ್ಕೆ ಪ್ರೇರಣೆ ದೊರತಿದ್ದು, ಆಂಧ್ರಪ್ರದೇಶದಲ್ಲಿ ಪ್ರತ್ಯೇಕ ಮೀಸಲಾತಿಗಾಗಿ ಆರಂಭಗೊಂಡ ಮಾದಿಗ ಚಳವಳಿಯು ಇದು ಮೀಸಲಾತಿಯಲ್ಲೇ ಮೀಸಲಾತಿ ಜಾರಿಗೆ ತರಲು ನಡೆಸಿದ ಈ ಚಳವಳಿ ರಾಯಚೂರು ಪ್ರದೇಶದಲ್ಲಿ ಇಂದಿಗೂ ಕೂಡ ಭರಾಟೆಯಿಂದ ನಡೆದ ಚಳವಳಿ(ಸಂದರ್ಶನ : ರಾಜು ಜೆ.ಬಿ., ೨೦.೦೨.೨೦೦೭).

ರಾಯಚೂರು ಪ್ರದೇಶದಲ್ಲಿ ಮಾದಿಗ ಜನಾಂಗಕ್ಕೆ ಅನ್ಯಾಯವಾಗಿದೆ. ಪ್ರತಿಕ್ಷೇತ್ರದಲ್ಲಿ ಅವರಿಗೆ ನ್ಯಾಯುತವಾದ ಸ್ಥಾನ ಸಿಗುತ್ತಿಲ್ಲ. ನಮಗೆ ಮೀಸಲಾತಿ ಸಿಗುವವರೆಗೆ ನಾವು ಈ ಮಾದಿಗ ಚಳವಳಿ

ಬಿಡುವುದಿಲ್ಲ, ಈ ಚಳವಳಿಯ ಹುಟ್ಟು ಯಾವ ರಾಜ್ಯದಲ್ಲಿ ಆದರೂ ಇಂದು ನಾವು ಈ ಚಳವಳಿಯ ಬೆಳವಣಿಗೆಯನ್ನು ವಿಶೇಷವಾಗಿ ರಾಯಚೂರಿನಲ್ಲಿ ಕಾಣುತ್ತೇವೆ. ಅಲ್ಲದೇ ಇಂದೂ ಮಾದಿಗ ಉಪಜಾತಿಗಳಾದ ಮಚೀಗೇರ, ಸಮಗಾರ, ಮಾಂಗ, ಮೋಚಿ ಮುಂತಾದವರ ಪಾತ್ರ ಮಾದಿಗ ಸಭೆ ಸಮಾರಂಭಗಳ ಬೆಳವಣಿಗೆಯಲ್ಲಿ ಮುಖ್ಯವಾಗಿದೆ.

**ಸಾಕ್ಷರತಾ ಚಳವಳಿ**

ರಾಯಚೂರು ಪ್ರದೇಶದ ಸಾಮಾಜಿಕ ಚಳವಳಿಗಳಲ್ಲಿ ಸಾಕ್ಷರತಾ ಆಂದೋಲನಾ ಚಳವಳಿ ೧೯೯೦-೯೧ರ ಅವಧಿಯಲ್ಲಿ ಹುಟ್ಟಿಕೊಂಡಿತು. ಸಾಕ್ಷರತಾ ಗುಣಮಟ್ಟವನ್ನು ಹೆಚ್ಚಿಸಲು ಮತ್ತು ಅನಕ್ಷರತೆಯನ್ನು ಹೋಗಲಾಡಿಸಲು ಅದರ ಜೊತೆಗೆ ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡು ಸಾಕ್ಷರತೆಯ ಬೆಳವಣಿಗೆಯನ್ನು ರಾಯಚೂರು ಪ್ರದೇಶದಲ್ಲಿ ಮಾಡಿದ್ದು, ನಿಜವಾಗಲೂ ಶ್ಲಾಘನೀಯ. ಈ ಸಾಕ್ಷರತೆಯ ಗುಣಮಟ್ಟದಿಂದ ಇಂದು ಈ ಪ್ರದೇಶದಲ್ಲಿ ಸಾಕ್ಷರತೆ ಉತ್ತಮಗೊಂಡಿದೆ.

ಜಿಲ್ಲಾ ಸಾಕ್ಷರತಾ ಸಮಿತಿಯು ಹಲವಾರು ಯೋಜನೆಗಳನ್ನು ಸಾಕ್ಷರತೆಯ ಮುಖಾಂತರ ಮಾಡುತ್ತಿರುವುದನ್ನು ನಾವು ಕಾಣುತ್ತೇವೆ. ಅವುಗಳೆಂದರೆ

೧. ನಿರಂತರ ಶಿಕ್ಷಣ ಕಾರ್ಯಕ್ರಮ

೨. ವಯಸ್ಕರ ಶಿಕ್ಷಣ ಪಡೆ

೩. ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ

೪. ಪುನಶ್ಚೇತನ ಕಾರ್ಯಕ್ರಮ

೫. ಕಲಿಕೆ ಗಳಿಕೆ

೬. ಏಡ್ಸ್ ಜಾಗೃತಿ ಕಾರ್ಯಕ್ರಮ

೭. ವಿದ್ಯಾರ್ಥಿಗಳ ಮೂಲಕ ಸಾಕ್ಷರತೆ

೮. ಶಿಬಿರಾಧರಿತ ಕಾರ್ಯಕ್ರಮ

೯. ಹೊಲಿಗೆ ತರಬೇತಿ ಕಾರ್ಯಕ್ರಮ

(ಜಿಲ್ಲಾ ಸಾಕ್ಷರತಾ ಸಮಿತಿ (ರಿ) ರಾಯಚೂರು, ಸಂಕ್ಷಿಪ್ತ ವರದಿ, ೨೦೦೭)

ಈ ಎಲ್ಲ ಸಾಕ್ಷರತಾ ಯೋಜನೆಗಳನ್ನು ಅವುಗಳಿಗನುಗುಣವಾದ ದಿನಗಳಲ್ಲಿ ಮಾಡಲಾಗುತ್ತಿದೆ. ಈ ಯೋಜನೆ ರಾಯಚೂರು ಪ್ರದೇಶದ ತೀರಾ ಹಿಂದುಳಿದ ತಾಲೂಕಾದ ದೇವದುರ್ಗದ ಜೊತೆಗೆ ಇತರ ತಾಲೂಕುಗಳಾದ ಮಾನ್ವಿ, ಸಿಂಧನೂರು, ಲಿಂಗಸ್ಗೂರು. ರಾಯಚೂರು (ಕೊಪ್ಪಳ ಜಿಲ್ಲೆ

ಸೇರಿದಂತೆ) ಗಳಲ್ಲಿ ನಡೆಯುತ್ತಿದೆ. ರಾಯಚೂರು ಪ್ರದೇಶದಲ್ಲಿ ಜಿಲ್ಲಾ ಸಾಕ್ಷರತಾ ಸಂಸ್ಥೆಯು ಕಾರ್ಯ ನಿರ್ವಹಿಸುತ್ತಿದ್ದು ಇವರು ಈ ಜಿಲ್ಲೆಯ ಸಾಕ್ಷರತೆ ಪ್ರಗತಿಗೆ ಬೆನ್ನೆಲುಬಾಗಿದ್ದಾರೆ. ಇತರೆ ಜಿಲ್ಲೆಗಳಿಗಿಂತ ಅತಿ ಹೆಚ್ಚಾಗಿ ಸಾಕ್ಷರತೆ ಮಟ್ಟವನ್ನು ಬೆಳೆಸಬೇಕೆಂಬ ಗುರಿ ಹೊಂದಿದೆ (ವ್ಯಕ್ತಿ ಸಂದರ್ಶನ : ಬಸಪ್ಪ, ೨೩.೦೭.೨೦೦೭). ಈ ಪ್ರದೇಶದಲ್ಲಿ ಸರ್ಕಾರದ ಸಹಾಯದ ಜೊತೆಗೆ ಖಾಸಗಿಯವರ ಸಹಾಯವನ್ನು ಪಡೆದುಕೊಂಡಿದೆ. ೧೯೯೧ರಲ್ಲಿ ಸಾಕ್ಷರತೆ ಗುಣಮಟ್ಟ ಶೇ.೩೫ರಷ್ಟು ಇದ್ದದ್ದು ಇಂದು ಸುಮಾರು ಶೇ.೪೮ರಷ್ಟು ಪ್ರತಿಶತ ಹಿಂದುಳಿದ ರಾಯಚೂರು ಪ್ರದೇಶದಲ್ಲಿ ಸಾಧಿಸುವುದು ನಿಜಕ್ಕೂ ಹೆಮ್ಮೆಪಡುವಂತಹದ್ದು.

## ರೈತ ಚಳವಳಿ

ರಾಯಚೂರು ಪ್ರದೇಶದಲ್ಲಿ ನಡೆದ ಸಾಮಾಜಿಕ ಚಳವಳಿಗಳಲ್ಲಿ ರೈತ ಚಳವಳಿಯು ಕೂಡ ಪ್ರಮುಖವಾದದ್ದು. ಈ ಚಳವಳಿ ಇಡೀ ರಾಯಚೂರು ಪ್ರದೇಶದಲ್ಲಿ ಒಂದು ಹೊಸ ಅಲೆಯನ್ನು ಸೃಷ್ಟಿಸಿದರೆಂದರೆ ತಪ್ಪಗಲಾರದು. ಏಕೆಂದರೆ ಇಲ್ಲಿ ಹಲವಾರು ರೈತ ಹೋರಾಟಗಳನ್ನು ಈ ಪ್ರದೇಶದಲ್ಲಿ ಕಾಣುತ್ತೇವೆ. ಈ ಪ್ರದೇಶಕ್ಕೆ ರೈತ ಹೋರಾಟ ಪ್ರೇರಣೆಯಾದದ್ದು ನವಲಗುಂದ-ನರಗುಂದ ರೈತ ಹೋರಾಟದಿಂದ ಈ ಪ್ರದೇಶದಲ್ಲಿ ೧೯೭೦-೮೦ರ ದಶಕದಲ್ಲಿ ನಾವು ರೈತ ಹೋರಾಟಗಳನ್ನು ಕಾಣುತ್ತೇವೆ (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯.೦೨.೨೦೦೭).

ರಾಯಚೂರು ಪ್ರದೇಶದಲ್ಲಿ ಪ್ರಮುಖವಾಗಿ ನಡೆದ ರೈತ ಹೋರಾಟ ನಾರಾಯಣಪುರ ಬಲದಂಡೆ ಕಾಲುವೆಗಾಗಿ ನಡೆದ ಚಳವಳಿ. ಇದು ಕೇವಲ ಒಂದು ಸಂಘಟನೆಯದ್ದಾಗಿರಲಿಲ್ಲ. ಇಲ್ಲಿ ಕರ್ನಾಟಕ ಪ್ರಾಂತ ರೈತ ಸಂಘ ಮತ್ತು ಕರ್ನಾಟಕ ರಾಜ್ಯ ರೈತ ಸಂಘ, ರಾಯಚೂರು ಕೃಷಿ ಕೂಲಿ ಕಾರ್ಮಿಕರ ಸಂಘ, ದಲಿತ ಸಂಘಟನೆ, ಇತರ ಹಲವಾರು ಸಂಘಟನೆಗಳು ಮಾಡಿದ ಈ ಹೋರಾಟವು ೧೯೮೫-೮೬ರಲ್ಲಿ ಹುಟ್ಟಿಕೊಂಡಿದೆ. ಈ ಚಳವಳಿ ಸುಮಾರು ೧೯೯೩-೯೪ರಲ್ಲಿ ಈ ಹೋರಾಟ ನಡೆಸಿದ ಫಲವಾಗಿ ನಾರಾಯಣಪುರ ಬಲದಂಡೆ ಕಾಲುವೆ ಸುಮಾರು ೭೦ ಕಿ.ಮೀ.ದ ಕಾಲುವೆ ರಾಯಚೂರು, ಲಿಂಗಸೂಗೂರು ಮತ್ತು ದೇವದುರ್ಗ ಪ್ರದೇಶದಲ್ಲಿ ಪಡೆದು ಯಶಸ್ವಿಯಾಗದಿರುವುದನ್ನು ಕಾಣುತ್ತೇವೆ.

೧೯೯೩-೧೯೯೪ರಲ್ಲಿ ಪ್ರಕೃತಿ ವಿಕೋಪದಿಂದಾಗಿ ದೊಡ್ಡ ಮಟ್ಟದಲ್ಲಿ ಬಹಳಷ್ಟು ಹಳ್ಳಿಗಳು ಮುಳುಗಿ ಹೋಗಿದ್ದವು. ರೈತರ ಜೀವನ ಬಹಳ ಕಷ್ಟಕರವಾಗಿತ್ತು. ದನಕರುಗಳು ಸತ್ತುಹೋಗಿದ್ದವು. ಮಳೆಯಿಲ್ಲದ ರೈತರ ಜೀವನ ಕಷ್ಟಕ್ಕೆ ಸಿಲುಕಿತ್ತು. ಇಂತಹ ಪರಿಸ್ಥಿತಿಯಲ್ಲಿ ರಾಯಚೂರು, ಮಾನ್ವಿ ಮತ್ತು ದೇವದುರ್ಗ ಜನ ಒಂದು ದೊಡ್ಡ ಹೋರಾಟ ಮಾಡಿ ಯಶಸ್ವಿಯಾಗಿರುವುದನ್ನು ನಾವು ಕಾಣುತ್ತೇವೆ. ಅಲ್ಲದೇ ಈ ರೈತ ಹೋರಾಟಗಳಲ್ಲಿ ಇತರೆ ಜನರು ಭಾಗವಹಿಸಿರುವುದು ಇದರ ವಿಶೇಷವಾಗಿದೆ. ಒಟ್ಟಿನಲ್ಲಿ ಈ ರೈತ ಹೋರಾಟಗಳ ಹುಟ್ಟು ಮತ್ತು ಬೆಳವಣಿಗೆ ಮುಖ್ಯವಾಗಿ ಹೇಗೆ ಪ್ರಗತಿ ಕಂಡಿತು ಎಂಬುದು ನಾವು ನೋಡಬಹುದು (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯.೦೨.೨೦೦೭).

ಟಿಪ್ಪಣಿಗಳು

೧. ಸಾಪೇಕ್ಷ ಅಲಭ್ಯತೆಯು ಸಾಮಾಜಿಕ ಚಳವಳಿ, ಸುಧಾರಣೆಗಳನ್ನು ಪ್ರೇರೆಪಿಸುತ್ತದೆ ಎಂಬ ವಾದವನ್ನು ಒಪ್ಪಿದರೂ, ಅದು ಕ್ರಾಂತಿಗೆ ಹೇಗೆ ಪ್ರೇರಣೆ ನೀಡುತ್ತದೆ ಎಂಬ ವಿವರಣೆ ಸಿಗುವುದಿಲ್ಲ. ಮಾರ್ಕ್ಸ್ ಎಂಗೆಲ್ಸ್ ಮತ್ತು ಅನೇಕ ಎಡಪಂಥೀಯ ಸಿದ್ಧಾಂತಕಾರರು ಸಾಪೇಕ್ಷ ಅಲಭ್ಯತೆಯ ಭಾವನೆಯು ಸಂಘರ್ಷಕ್ಕೆ ಎಡೆ ಮಾಡಿಕೊಡುತ್ತದೆ ಎಂದು ನಂಬುತ್ತಾರೆ. ಈ ಸಂಘರ್ಷದ ಅಂತಿಮಘಟ್ಟವೇ ಚಳವಳಿ, ಸಮಾಜದ ಅಮೂಲಾಗ್ರ ಪರಿವರ್ತನೆ (ನಾಗೇಶ್, ೧೯೮೮: ೧೨-೧೩).

೨. ಸಾಮಾಜಿಕ ಚಳವಳಿ ಎಂಬುದು ಸಮಾಜದ ಚಲನೆ, ಸ್ಥಿತ್ಯಂತರ ಅಥವಾ ಬದಲಾವಣೆಗೆ ಸಂಬಂಧಿಸಿ ನಡೆಯುವ ಒಂದು ವ್ಯವಸ್ಥಿತ ಮತ್ತು ಸ್ವಾಭಾವಿಕ ಕ್ರಿಯೆ. 'ವ್ಯವಸ್ಥಿತ' ಏಕೆಂದರೆ ಅದರ ಹಿಂದೆ ಒಂದು ಧ್ಯೇಯ, ಯೋಜನೆ ಹಾಗೂ ಕಾರ್ಯಕ್ರಮ ಇರುತ್ತದೆ. 'ಸ್ವಾಭಾವಿಕ' ಕ್ರಿಯೆ ಹೇಗೆಂದರೆ ಮಾನವ ಜನಾಂಗದ ವಿಕಾಸದ ವಿವಿಧ ಮಜಲುಗಳಲ್ಲಿ ಇಂಥ ಚಳವಳಿಗಳು ಉದ್ದಕ್ಕೂ ನಡೆದಿವೆ (ಮಣಿಪಾಲ ಆರ್ಕೆ, ೧೯೯೭: ೦೯).

೩. ಹರ್‌ಬರ್ಟ್ಸ್ ಬ್ಲೂಮರ್‌ನ ಪ್ರಕಾರ 'ಹೊಸ ಜೀವನ ಕ್ರಮವನ್ನು ರೂಢಿಸುವುದಕ್ಕಾಗಿ ಮಾಡುವ ಸಾಮುದಾಯಿಕ ಪ್ರಯತ್ನವೇ' ಸಾಮಾಜಿಕ ಚಳವಳಿಯಾಗಿದೆ.

ಲಿನಿಸ್‌ಕಿಲ್ಲಿಯನ ಪ್ರಕಾರ 'ಸಮಾಜೋ ಸಾಂಸ್ಕೃತಿಕ ಕ್ರಮವನ್ನು ಬದಲಿಸಲು ಅಥವಾ ಬದಲಾಗುತ್ತಿರುವುದನ್ನು ತಡೆಗಟ್ಟಲು ಕೈಗೊಳ್ಳುವ ಸಾಮುದಾಯಿಕ ಶ್ರಮವನ್ನು ಚಳವಳಿ' ಎನ್ನುತ್ತಾರೆ.

ಜೇಮ್ಸ್‌ವುಡ್ ಮತ್ತು ಜಾಕ್‌ಸನ್ ಮಾಲಿಸ್‌ರ ಪ್ರಕಾರ 'ಸಾಮಾಜಿಕ ಚಳವಳಿಗಳ ಸಂಘಟನೆಯ ಸ್ವರೂಪವನ್ನಾಧರಿಸಿ, ಕ್ರಾಂತಿಕಾರಕ ಅಥವಾ ಸುಧಾರಣಾತ್ಮಕವಾದ ಬದಲಾವಣೆಯನ್ನು ರೂಪಿಸುವ ಅಥವಾ ತಡೆಗಟ್ಟುವ ದಿಕ್ಕಿನಲ್ಲಿ ಯಾವುದೇ ರಾಜಿಗೊಳಪಡದ ಗುಂಪುಗಳ ಸಂಘಟನಾತ್ಮಕ ಪ್ರಯತ್ನವನ್ನು ಚಳವಳಿ' ಎನ್ನುತ್ತಾರೆ.

ಟಿ.ಕೆ.ಓಮನ್‌ರ ಪ್ರಕಾರ 'ಪರಿಧಿಯಲ್ಲಿರುವ ಮನುಷ್ಯನು ಕೇಂದ್ರದೆಡೆಗೆ ಚಲಿಸಲು ವ್ಯವಸ್ಥಿತವಾಗಿ ರೂಪಿಸಿಕೊಳ್ಳುವ ಸಾಮೂಹಿಕ ಕ್ರಿಯೆಯನ್ನು' ಚಳವಳಿ ಎಂದು ಕರೆಯುತ್ತಾರೆ (ಉಷಾ, ೨೦೦೪: ೩).

೪. ೭೦ರ ದಶಕವು ಕರ್ನಾಟಕದ ಸಂದರ್ಭದಲ್ಲಿ ಅತ್ಯಂತ ಮಹತ್ವದ ಕಾಲಘಟ್ಟವಾಗಿದೆ. ಇದನ್ನು ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಸ್ಥಿತ್ಯಂತರ ಕಾಲಘಟ್ಟ ಎನ್ನಬಹುದು. ನಂತರ ೧೯೭೨ರಲ್ಲಿ ದಲಿತ ಕ್ರಿಯಾ ಸಮಿತಿ ಹುಟ್ಟಿಕೊಂಡಿತು. ಎರಡು ವರ್ಷಗಳ ನಂತರ (೧೯೭೪) ಭದ್ರಾವತಿಯ ಬಿ.ಕೃಷ್ಣಪ್ಪನವರ ನಾಯಕತ್ವದಲ್ಲಿ ಹೋರಾಟಕ್ಕಿಳಿದ ಕರ್ನಾಟಕದ ದಲಿತ ಸಂಘರ್ಷ ಸಮಿತಿ, ದಲಿತ ಕ್ರಿಯಾಸಮಿತಿಯ ಮುಂದುವರಿದ ವಿಸ್ತೃತ ರೂಪವಾಗಿದೆ. ಕೃಷ್ಣಪ್ಪನವರು ವಾಙ್ಮಯಿ, ಸಾಮಾಜಿಕ ಚಿಂತಕ ಮತ್ತು ಅಂಬೇಡ್ಕರ್ ಅವರ ತಾತ್ವಿಕ ಚಿಂತನೆಗಳಲ್ಲಿ ನಂಬಿಕೆಯುಳ್ಳವರಾಗಿದ್ದರು. ಇವರು ಸಾಮಾಜಿಕ, ಸಾಂಸ್ಕೃತಿಕ ಒಲವುಗಳ ಕಡೆಗೆ ತಮ್ಮ ಚಿಂತನೆಯನ್ನು ಹರಿಬಿಟ್ಟವರಾಗಿದ್ದರು. ಅಂತೆಯೇ ಶಿವಮೊಗ್ಗ ಪರಿಸರದ ವಿಚಿತ್ರ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಬಂಡಾಯ ಕೃಷ್ಣಪ್ಪನವರ ಪ್ರಜ್ಞೆಯನ್ನು ಎತ್ತಿ ತೋರಿಸುತ್ತದೆ (ಗೊಳಸಂಗಿ, ೨೦೦೩: ೧೨೧). ಪ್ರಾರಂಭದಲ್ಲಿ ದಲಿತ ಸಂಘರ್ಷ ಸಮಿತಿಗೂ ಖಚಿತವಾದ ತಾತ್ವಿಕ ಒಳನೋಟ ಇರಲಿಲ್ಲ. ಈ ಸಂಘಟನೆ ಆಳದಲ್ಲಿ ವಿದ್ಯಾವಂತ ದಲಿತ, ಪ್ರಜ್ಞಾವಂತ ದಲಿತ ನೌಕರರ ಅಸ್ಫೋಟಗೊಂಡ ಮನಸ್ಸುಗಳ ಸಮಾವೇಶವಾಗುತ್ತಿದೆ ಎಂದು ಹೇಳಿದರೆ ತಪ್ಪಾಗಲಾರದು. ಮುಂದೆ ಕೃಷ್ಣಪ್ಪನವರು ಶೋಷಿತರ ಜಾತಿವಾದಿಗಳ

ಮತ್ತು ಜನ ವಂಚಕರ ಹಾಗೂ ರಾಜಕಾರಣಿಗಳ ವಿರುದ್ಧ ದಲಿತರಲ್ಲಿ ಹೋರಾಟದ ಪ್ರಜ್ಞೆಯನ್ನು ಬೆಳೆಸುವಲ್ಲಿ ಯಶಸ್ವಿಯಾದರು. ಇದರಿಂದಾಗಿ ರಾಜಕಾರಣಿಗಳು ವಿಧಾನಸೌಧದ ಒಳಗಡೆ ಅವಿತುಕೊಂಡರು. ಭೂಮಾಲೀಕರು ಭಯಗ್ರಸ್ತರಾದರು. ಜಾತಿವಾದಿಗಳು ಅದರತೊಡಗಿದರು. ಕರ್ನಾಟಕದ ಎಲ್ಲ ಅವಮಾನಿತ ವರ್ಗಗಳು ಕೂಡ ಹೊಸ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಪ್ರಜ್ಞೆಯೊಂದಿಗೆ ತಮ್ಮ ಹಕ್ಕುಗಳಾಗಿ, ಸ್ವಾಭಿಮಾನದ ಬದುಕಿಗಾಗಿ ಸಮಾನತೆಯ ಆಶಯಗಳಿಗಾಗಿ ಧುಮುಕುತ್ತಿದ್ದ ಹೋರಾಟದ ಕೆಚ್ಚನ್ನು ಈ ಕೆಳವರ್ಗದಲ್ಲಿ ಬೆಳೆಸುವಲ್ಲಿ ಕೃಷ್ಣಪ್ಪನವರ ಪಾತ್ರ ಅತ್ಯಂತ ಮಹತ್ವದ್ದು (ಗೋಳಸಂಗಿ, ೨೦೦೩: ೧೨೨). ಒಟ್ಟಿನಲ್ಲಿ ದಲಿತ ಸಾಹಿತ್ಯದ ಉತ್ತಮ ಪ್ರಯತ್ನಗಳು ಸೃಷ್ಟಿಯಾದದ್ದು ಈ ಕಾಲಘಟ್ಟದಲ್ಲಿ ಎಂದು ಹೇಳಬಹುದು.

ಪ್ರಜ್ಞೆ ಪ್ರತಿಭಟನೆಯಾಗಿ ಸಾಂದ್ರಗೊಳ್ಳುವುದು ಸಂಘರ್ಷದ ಸಂದರ್ಭದಲ್ಲಿ ಜನತೆಯ ಪ್ರಜ್ಞೆಯನ್ನೆ ಸಾಮಗ್ರಿಯನ್ನಾಗಿ ಪಡೆದ ಚಳವಳಿಗಳು ಹೊಸ ಬದಲಾವಣೆ ತರುತ್ತವೆ. ರಾಯಚೂರು ಪ್ರದೇಶದಲ್ಲಿ ನಡೆದ ಸಾಮಾಜಿಕ ಚಳವಳಿಗಳು ಒಂದು ಹೊಸ ಮಾರ್ಗವನ್ನೇ ತೋರಿಸಿವೆ ಎಂದು ಹೇಳಬಹುದು. ಸಾಂಪ್ರದಾಯಿಕ ಶೋಷಕನ ಗದ್ದುಗೆಯನ್ನು ಈಗ ಜಾಗತೀಕರಣ ಆಕ್ರಮಿಸಿದೆ. ಉಳ್ಳವರ ಪರ ಇರುವ ಜಾಗತೀಕರಣ ಉಂಟುಮಾಡುತ್ತಿರುವ ಆಘಾತಗಳಿಗೆ ಬಲಿಯಾಗುತ್ತಿರುವವರು ಶ್ರಮಿಕರು. ವ್ಯವಸ್ಥೆಯ ನಿಯಂತ್ರಕರು ಶೋಷಿತರ ಮೇಲೆ ಸವಾರಿ ಮಾಡಲು ಹೊರಟಿರುವ ಈ ಆತಂಕದ ಹೊತ್ತಿನಲ್ಲಿ ಅಂತರ ಸೃಷ್ಟಿಸಿಕೊಂಡಿರುವ ದಲಿತ, ರೈತ, ಕಾರ್ಮಿಕ ಸಮೂಹಗಳು ಒಗ್ಗೂಡಲಿ ಎನ್ನುವುದು ವರ್ತಮಾನದ ಅಪೇಕ್ಷೆ ಮತ್ತು ನಿರೀಕ್ಷೆ(ವೆಂಕಟೇಶ್ ಮತ್ತು ಸರೋಜ, ೨೦೦೬ : ೧೨೭).

ಹಿಂದುಳಿದ ಹಣೆಪಟ್ಟಿ ಪಡೆದ ರಾಯಚೂರು ಜಿಲ್ಲೆ ಸಾಮಾಜಿಕ ಚಳವಳಿಗಳ ಮುಖಾಂತರ ಇಡೀ ಜನಸಮುದಾಯವನ್ನೇ ಅಲುಗಾಡಿಸಿದೆ. ಬಹುದಿನಗಳಿಂದ ಸಮಾಜದಲ್ಲಿ ತಾಂಡವವಾಡುತ್ತಿದ್ದ ಶೋಷಣೆ, ದಬ್ಬಾಳಿಕೆ, ಪ್ರವೃತ್ತಿ ಮತ್ತು ಆರ್ಥಿಕ ಅಸಮಾನತೆಯಿಂದ ಬಹುತೇಕ ಕೆಳಜಾತಿಗಳು ರೋಸಿ ಹೋಗಿದ್ದವು. ಇದಕ್ಕೆ ಪೂರಕವಾಗಿ ಆ ಪ್ರದೇಶದಲ್ಲಿ ಹೋರಾಟಗಳಿಗೆ ನಾಂದಿಯಾಯಿತು. ಆ ಮುಖಾಂತರ ದಮನಿತ ವರ್ಗಗಳು ಪಡೆಯಬೇಕಾದ ಸವಲತ್ತುಗಳು ಸಿಗುವಂತಾಗಲು ಅನೇಕ ಚಳವಳಿಗಳು ಕಾರಣೀಭೂತವಾದವು. ಅಂತಹ ಪ್ರಮುಖ ಚಳವಳಿಗಳಾದ ದಲಿತ, ಮಾದಿಗ, ರೈತ, ಸಾಕ್ಷರತಾ ಮತ್ತು ಕಾರ್ಮಿಕ ಚಳವಳಿಗಳು ತನ್ನದೇ ಆದ ಪ್ರಭಾವವನ್ನು ಈ ಪ್ರದೇಶದ ಮೇಲೆ ಬೀರಿರುವುದನ್ನು ಅವುಗಳ ಬಗ್ಗೆ ಪ್ರಸ್ತುತ ಅಧ್ಯಾಯದಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

## ದಲಿತ ಚಳವಳಿ

ಶತ ಶತಮಾನಗಳಿಂದ ನಡೆದುಕೊಂಡು ಬಂದಿರುವ ದಲಿತರ ಶೋಷಣೆಯ ವಿರುದ್ಧದ ವಿಮೋಚನೆಯ ಹಾದಿಯಾಗಿ ೧೯೭೪ರಲ್ಲಿ ದಲಿತ ಸಂಘರ್ಷ ಸಮಿತಿ ಉದಯವಾಯಿತು. ಪ್ರೊ.ಬಿ.ಕೃಷ್ಣಪ್ಪ ಅವರ ನೇತೃತ್ವದಲ್ಲಿ ನಡೆದ ದಲಿತರ ಸಂಘಟನೆಯ ಪ್ರತಿರೂಪ. ಈ ಸಂಘಟನೆ ಡಾ.ಬಿ.ಆರ್. ಅಂಬೇಡ್ಕರ್ ಹೇಳುವ "ಶಿಕ್ಷಣ", "ಸಂಘಟನೆ", "ಹೋರಾಟ" ಮುಂತಾದ ತತ್ವಗಳು ದಲಿತ ಸಂಘರ್ಷ ಸಮಿತಿಯ ಸ್ವರೂಪವನ್ನು ನಿರ್ಧರಿಸಿವೆ. "ದುಡಿಯುವ" ಜನಗಳ ಹಸಿವು, ಅಸಮಾನತೆ, ಅಸ್ಪೃಶ್ಯತೆಗಳ ನಿವಾರಣೆಯೇ ಈ ಸಂಘಟನೆಯ ಧ್ಯೇಯವಾಗಿದೆ (ಪಾಟೀಲ, ೨೦೦೨: ೧೭೪). ಅನಕ್ಷರತೆ, ಅಜ್ಞಾನ, ಮಾನಸಿಕ ಮತ್ತು ದೈಹಿಕ ಅಸ್ಪೃಶ್ಯತೆ, ಮೇಲುಜಾತಿಗಳ ಶೋಷಣೆ, ರಾಜಕೀಯ ಗುಲಾಮಗಿರಿ, ಹಣಕಾಸಿನ ಕೊರತೆ, ದುಡಿದರೂ ತುಂಬದ ಹೊಟ್ಟೆ, ಸಾಂಸ್ಕೃತಿಕ ದಾಸ್ಯಗಳು, ಹಳ್ಳಿಗಾಡಿನ ನರನಾಡಿಗಳಲ್ಲಿ

ಬಲವಾಗಿ ಬೇರುಬಿಟ್ಟಿದ್ದವು. ಅದೆಲ್ಲದರ ವಿರುದ್ಧ ಸಂಘಟನೆಯು ವಿಮೋಚನೆಯ ಒಂದು ದಾರಿಯಾಗಿ ತೋರಿತು. ಹಳ್ಳಿಹಳ್ಳಿಗೆ ಅಂಬೇಡ್ಕರ್‌ರನ್ನು ಕೊಂಡೊಯ್ಯುವುದು ದಲಿತ ಸಂಘಟನೆಯ ಆದ್ಯ ಕರ್ತವ್ಯವಾಗಿತ್ತು. ಹಸಿವು, ನೀರಡಿಕೆ, ನಿದ್ರೆಗಳನ್ನು ತೊರೆದು ಹಳ್ಳಿ ಹಳ್ಳಿಗಳಲ್ಲಿ ಸಂಚರಿಸಿದ ದಲಿತ ಸಂಘಟನೆಗೆ ಈ ವೃತ್ತಿಯಿಂದ ಹಣ ಸಂಪಾದನೆಯಾಗುತ್ತಿರಲಿಲ್ಲ. ಜನರ ಸಂಪಾದನೆಯಾಗುತ್ತಿತ್ತು (ಕಮಲೇಶ್, ೨೦೦೩: ೩೭೫).

ಈಗಾಗಲೇ ಸ್ಪಷ್ಟವಾಗಿರುವಂತೆ ನಮ್ಮ ಸಮಾಜದಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಅತ್ಯಂತ ಕೆಳಮಟ್ಟದಲ್ಲಿರುವ ವರ್ಗವೆಂದರೆ ದಲಿತರು. ಅವರು ಸಮಾಜದಲ್ಲಿ ಎದುರಿಸುತ್ತಿರುವ ತಾರತಮ್ಯ, ದೌರ್ಬಲ್ಯಗಳನ್ನು ಸರಿಪಡಿಸುವ ಉದ್ದೇಶದಿಂದಲೇ ದಲಿತರಿಗೆ ಸಂವಿಧಾನ ಮೀಸಲಾತಿ ಸೌಲಭ್ಯವನ್ನು ಒದಗಿಸಲಾಯಿತು. ಶಾಸನಾತ್ಮಕವಾಗಿ ದಲಿತರಿಗೆ ಎಲ್ಲ ಬಗೆಯ ರಕ್ಷಣೆಗಳನ್ನು ಒದಗಿಸಲಾಗಿದೆ. ರಾಜಕೀಯ ಪ್ರಾತಿನಿಧ್ಯವನ್ನು ಕಾಯ್ದುಕೊಳ್ಳಲು ಚುನಾವಣಾ ಕ್ಷೇತ್ರಗಳನ್ನು ಅವರಿಗೆ ಮೀಸಲಿಡುವ ಪದ್ಧತಿಯನ್ನು ಜಾರಿಗೆ ತರಲಾಗಿದೆ. ಉದ್ಯೋಗದಲ್ಲಿ ಮೀಸಲಾತಿ ಸೌಲಭ್ಯವಿದೆ. ಸಾಮಾಜಿಕವಾಗಿ ಅವರಿಗೆ ರಕ್ಷಣೆ ಒದಗಿಸುವ ಉದ್ದೇಶದಿಂದ ಅಸ್ಪೃಶ್ಯತೆ ಆಚರಣೆಯನ್ನು ನಿಷೇಧಿಸಲಾಗಿದೆ (ಚಂದ್ರಶೇಖರ, ೨೦೦೫ : ೯೮). ಇಷ್ಟಾದರೂ ದಲಿತರ ಸ್ಥಿತಿಗತಿಗಳು, ಸ್ಥಾನಮಾನಗಳು ನಿರೀಕ್ಷಿಸಿದ ಮಟ್ಟದಲ್ಲಿ ಉತ್ತಮಗೊಂಡಿಲ್ಲ. ಶಾಸನಾತ್ಮಕ ರಕ್ಷಣೆ ಏನೋ ದೊರಕಿದೆ. ಅವು ಆಚರಣೆಯಲ್ಲಿ ಫಲ ನೀಡುತ್ತಿಲ್ಲ. ಯಾವುದೇ ಮಾನದಂಡ ತೆಗೆದುಕೊಂಡರು ದಲಿತರ ಸ್ಥಿತಿಗತಿಗಳು ಹಾಗೂ ಸ್ಥಾನಮಾನಗಳು ಸಮಾಜದ ಉಳಿದೆಲ್ಲ ಸಮುದಾಯಗಳಿಗಿಂತ ಕೆಳಮಟ್ಟದಲ್ಲಿರುವುದು ಕಂಡುಬರುತ್ತದೆ. ದಲಿತರು ತಮ್ಮ ಸ್ವಾಭಿಮಾನವನ್ನು, ತಮ್ಮ ರಾಜಕೀಯ-ಸಾಮಾಜಿಕ-ಆರ್ಥಿಕ ಹಕ್ಕುಗಳನ್ನು ರಕ್ಷಿಸಿಕೊಳ್ಳಲು ಸಂಘಟಿತ ಪ್ರಯತ್ನವನ್ನು ನೂರಾರು ವರ್ಷಗಳಿಂದ ನಡೆಸುತ್ತಾ ಬಂದಿದ್ದಾರೆ. ದಲಿತ ಚಳವಳಿಯು ಒಂದು ದಿಶೆಯಲ್ಲಿ ದಲಿತರು ಒಂದು ಶಕ್ತಿಯಾಗಿ ಬೆಳೆಯಲು ನೆರವಾಗಿದೆ (ಚಂದ್ರಶೇಖರ, ೨೦೦೫: ೯೮).

೧೯೭೦ರ ದಶಕದಲ್ಲಿ ದಲಿತ ಸಂಘಟನೆಗಳು ಮೈಸೂರು, ಬೆಂಗಳೂರು, ಶಿವಮೊಗ್ಗ ಈ ಪ್ರದೇಶದಲ್ಲಿ ಬೆಳೆಯತೊಡಗಿತ್ತು. ಇಂತಹ ಸಂದರ್ಭದಲ್ಲಿ ರಾಯಚೂರು ಪ್ರದೇಶದ ಮೇಲೆ ಕೂಡ ದಲಿತ ಸಂಘರ್ಷ ಸಮಿತಿ ಪ್ರಭಾವ ಬೀರಿತು. ನಂತರ ಇಲ್ಲಿ ದಲಿತ ಸಂಘರ್ಷ ಸಮಿತಿಯು ಪ್ರಗತಿಪರ ಸಂಘಟನೆ ಹೋರಾಟವಾಗಿ ಪ್ರಾರಂಭವಾಯಿತು. ನಂತರ ದಿನಗಳಲ್ಲಿ ಇಡೀ ದಲಿತರ ಬದುಕಿಗೆ ಪೂರಕವಾದ ಚಳವಳಿಗೆ ಸ್ಪಂದಿಸಿತು. ಆದರೆ ವಿಶೇಷವಾಗಿ ರಾಯಚೂರು ಪ್ರದೇಶದ ಮೇಲೆ ೧೯೭೫ರ ನಂತರ ಇಲ್ಲಿ ದಲಿತ ಸಂಘರ್ಷ ಸಮಿತಿ ಪ್ರಾರಂಭವಾಯಿತು.

೧೯೭೮ರಲ್ಲಿ ರಾಯಚೂರು ಭೇಟಿ ನೀಡಿದ ದಲಿತ ಸಂಘರ್ಷ ಸಮಿತಿಯ ನೇತಾರನಾದ ಪ್ರೊ.ಬಿ.ಕೆ.ಕೃಷ್ಣಪ್ಪನವರು ಈ ಪ್ರದೇಶಕ್ಕೆ ಬಂದು ಇಲ್ಲಿ ದಲಿತರ ಬಗ್ಗೆ ತಮ್ಮ ಮಾತುಗಳ ಮುಖಾಂತರ ಹುರಿದುಂಬಿಸಿದರು. ಇವರ ಈ ಚಿಂತನೆಗಳು ರಾಯಚೂರು ಪ್ರದೇಶದಲ್ಲಿ ಇಂದಿಗೂ ಕೂಡ ಅವರ

ತತ್ವಗಳ ಪಾಲನೆಯಲ್ಲಿ ದಲಿತ ಸಂಘರ್ಷ ಸಮಿತಿ ತೊಡಗಿದೆ. ಇವರೇ ರಾಯಚೂರಲ್ಲಿ ದಲಿತ ಸಂಘರ್ಷ ಸಮಿತಿಯ ಪ್ರೇರಣೆಕರ್ತರು.

ರಾಯಚೂರಿನಲ್ಲಿ ಬಿ.ಕೃಷ್ಣಪ್ಪನವರ ನೇತೃತ್ವದಲ್ಲಿ ಹುಟ್ಟಿಕೊಂಡ ದಲಿತ ಸಂಘರ್ಷ ಸಮಿತಿಯು ೧೯೭೦-೮೦ರ ದಶಕದಿಂದ ಇಲ್ಲಿಯವರೆಗೆ ಹಲವಾರು ಚಳವಳಿಗಳನ್ನು ಮಾಡಿದೆ. ಇದು ದಲಿತರಿಗೆ ಶೋಷಣೆಯಿಂದ ಹೊರಬರಲು, ದಲಿತರಿಗೆ ಭೂಮಿ ದೊರಕಿಸಿಕೊಡಲು, ಹೋಟೆಲ್‌ಗಳಲ್ಲಿ ಪ್ರವೇಶ ಮತ್ತು ಪ್ರಮುಖವಾಗಿ ದೇವಸ್ಥಾನದಲ್ಲಿ ಪ್ರವೇಶ ಮಾಡಲು ಅವಕಾಶ ಮಾಡಿ ಕೊಟ್ಟಿದೆ ಎಂದು ಹೇಳಬಹುದು. ಪ್ರಮುಖವಾಗಿ ರಾಯಚೂರು ಪ್ರದೇಶದ ದಲಿತ ಸಂಘರ್ಷ ಸಮಿತಿಯ ನಾಯಕರೆಂದರೆ ಸಿ.ದಾನಪ್ಪ, ಆರ್.ಮಾನಸಯ್ಯ, ಭೀಮಣ್ಣ, ವೆಂಕಟೇಶ, ಈರಣ್ಣ, ಉರುಕುಂದಪ್ಪ, ಬಸವರಾಜ ಮತ್ತು ಎಮ್.ವಿರುಪಾಕ್ಷಿ, ಹನುಮದಾಸ್ ಮುಂತಾದವರ ಜೊತೆಗೆ ಜಂಬಣ್ಣ ಅಮರಚಿಂತ, ಚೆನ್ನಣ್ಣ ವಾಲೀಕಾರ, ಮಾಸ್ಟರ್ ಭಂಡಾರಿಗಲ್, ಮಾಸ್ಟರ್ ಕರಿಯಪ್ಪ, ಬಸವರಾಜ್ ಕಾಡ್ ಮುಂತಾದವರು. ದಲಿತರು ಮತ್ತು ದಲಿತರಲ್ಲದವರೂ ಕೂಡ ಈ ಪ್ರದೇಶದಲ್ಲಿ ದಲಿತರ ಜೀವನಕ್ಕೆ ದಾರಿದೀಪವಾದಂತಹ ಕಾರ್ಯಕ್ರಮಗಳು ಅಥವಾ ಚಳವಳಿಗಳನ್ನು ಮಾಡಿದ್ದಾರೆ. ದಲಿತ ಸಂಘರ್ಷ ಸಮಿತಿಯು ಈ ಪ್ರದೇಶದಲ್ಲಿ ಹಲವಾರು ಚಳವಳಿಗಳನ್ನು ಹಮ್ಮಿಕೊಂಡಿದೆ. ಮೆದಕಿನಾಳ ಭೂಹೋರಾಟ, ಮಹಮದ್‌ನಗರ ಭೂಹೋರಾಟ, ಗೆಜ್ಜಲಗೆಟ್ಟ ಭೂಹೋರಾಟ ಮತ್ತು ಇತರೆ ಹೋರಾಟಗಳು ಈ ಪ್ರದೇಶದಲ್ಲಿ ಪ್ರಮುಖ ಪಾತ್ರ ವಹಿಸಿವೆ. ಅವುಗಳನ್ನು ಈ ಕೆಳಗಿನಂತೆ ಅವಲೋಕಿಸಬಹುದು.

### ಮೆದಕಿನಾಳ ಭೂ ಹೋರಾಟ

ರಾಯಚೂರು ಪ್ರದೇಶದ ಲಿಂಗಸೂಗೂರು ತಾಲ್ಲೂಕಿನ ಮೆದಕಿನಾಳದಲ್ಲಿ ನಡೆದ ದಲಿತ ಸಂಘರ್ಷ ಸಮಿತಿಯ ಪ್ರಮುಖ ಹೋರಾಟ ಇದಾಗಿದೆ. ಈ ಹೋರಾಟಕ್ಕೆ ಪ್ರಮುಖವಾದ ಅಂಶವೆಂದರೆ, ಮೆದಕಿನಾಳ ಎಂಬ ಗ್ರಾಮದಲ್ಲಿ ಲಿಂಗಾಯತ ಮತ್ತು ಒಕ್ಕಲಿಗರು ಹಾಗೂ ಶ್ರೀಮಂತರ ಶೋಷಣೆಗೆ ಒಳಗಾದ ದಲಿತರು ಹಾಗೂ ಅಸ್ಪೃಶ್ಯರು, ಮೇಲ್ವರ್ಗದವರ ಮನೆಯಲ್ಲಿ ಜೀತದಾಳುಗಳಾಗಿ ದುಡಿಯುತ್ತ, ಮಲಹೊರುವಂಥ ಅನಿಷ್ಟಪದ್ಧತಿ ಕೆಲಸವನ್ನು ಈ ಶೋಷಿತ ಜನರು ಮಾಡಬೇಕಾಗಿತ್ತು. ಮೇಲ್ವರ್ಗದವರ ದೃಷ್ಟಿಯಲ್ಲಿ ದಲಿತರು ಕೀಳು ಜಾತಿಯವರಾದ್ದರಿಂದ ಅವರನ್ನು ನಾಯಿಗಿಂತ ಕೀಳು ಮಟ್ಟದಲ್ಲಿ ಶೋಷಣೆ ಮಾಡುತ್ತಿದ್ದರು. ಈ ಒಂದು ಸಂದರ್ಭ ದಲಿತರನ್ನು ರಾತ್ರಿ ಹಗಲು ಕಂಗೆಡಿಸುತ್ತಿತ್ತು. ದಲಿತರ ಕೂಗು ಆ ಸಂದರ್ಭದಲ್ಲಿ ದಲಿತರಿಗೆ ಮಾತ್ರ ಗೊತ್ತಿತ್ತೇ ಹೊರತು ಬೇರೆ ವರ್ಗದ ಜನರಿಗೆ ಇವರ ನೋವು ಏನೆಂದು ತಿಳಿಯುತ್ತಿರಲಿಲ್ಲ. ಈ ಸಂದರ್ಭದಲ್ಲಿ ದಲಿತ ಸಂಘಟನೆಯು ಎಚ್ಚೆತ್ತುಕೊಂಡು ಈ ಪ್ರದೇಶಕ್ಕೆ ದಲಿತ ಸಂಘರ್ಷ ಸಮಿತಿಯು ಬಂತು. ದಲಿತರ ಪರವಾಗಿ, ದಲಿತರ ಕೂಗಿಗೆ ಪ್ರತಿಯಾಗಿ ಧ್ವನಿ ನೀಡಲು ದಲಿತ ಸಂಘರ್ಷ ಸಮಿತಿಯು ತನ್ನ ಹೋರಾಟದ ಮುಖಾಂತರ

# ಮೆದಕಿನಾಳ ಗ್ರಾಮದಲ್ಲಿ ನಡೆದ ಭೂಹೋರಾಟ




ಆಕರ ಸ್ಫೂರ್ತಿ : ತುಕಾರಾಂ ಎಸ್. ಮತ್ತು ರಾಜು ಬಿ., ಸಾಕ್ಷರತಾ ದಾರಿಯ ಸಾವಿರ ಹೆಜ್ಜೆ (ಕರ್ನಾಟಕ ರಾಜ್ಯ ಸಾಕ್ಷರತಾ ಆಂದೋಲನದ ದಶಕದ ಸಾಧನೆಗಳು), ನಿರ್ದೇಶಕರು, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು, ೨೦೦೦, ಪು.೪೩

ಚಳವಳಿ ಪ್ರಾರಂಭಿಸಿತು. ಹೋರಾಟ ಮಾಡುವುದಕ್ಕಿಂತ ಮೊದಲು ದಲಿತ ಸಂಘರ್ಷ ಸಮಿತಿಯು ಹಾಡುಗಳ ಮುಖಾಂತರ ಅವರಿಗೆ ಅರಿವನ್ನು ಮೂಡಿಸುತ್ತಿದ್ದರು. ಆ ಹಾಡು ಈ ಕೆಳಗಿನಂತಿದೆ.

ಅಂಬೇಡ್ಕರ್ ಹೇಳಿದ ಮಾತು
ಮರೆಯಬೇಡಿ ಮರೆತು ಮಲಗಬೇಡಿ
ಜಾತಿವರ್ಗ ಒಂದೇ ನಾಣ್ಯದ ಎರಡು ಮುಖಗಳು
ವಂಚಿತರೇ ಈ ದೇಶದ ವಾರಸದಾರರು
ಅಂಬೇಡ್ಕರ್ ಹೇಳಿದ ಮಾತು
ಮರೆಯಬೇಡಿ ಮರೆತು ಮಲಗಬೇಡಿ
ಶಿಕ್ಷಣ, ಸಂಘಟನೆ, ಹೋರಾಟ
ಮುತ್ತಿನಂತ ಮೂರೇ ಸೂತ್ರ
ದಲಿತ ಜನಾಂಗಕ್ಕೆ ಧೈರ್ಯ ಹೇಳುವಂತ
ಅದುವೇ ಓದು ಅದುವೇ ಬರಹ
ಅದುವೇ ಸ್ವಾಭಿಮಾನವೆಂದರೆ
ಅಂಬೇಡ್ಕರ್ ಹೇಳಿದ ಮಾತು
ಮರೆಯಬೇಡಿ ಮರೆತು ಮಲಗಬೇಡಿ (ಸಂದರ್ಶನ : ದಾನಪ್ಪ ಸಿ., ೧೪.೦೩.೨೦೦೭)[3]

ಈ ರೀತಿಯ ಕ್ರಾಂತಿಗೀತೆಯನ್ನು ಹಾಡಿ ಈ ದಲಿತರನ್ನು ಹೋರಾಟಕ್ಕೆ ಮೇಲುವರ್ಗದವರ ವಿರುದ್ಧ ಎಚ್ಚರಿಸುವಂತೆ ಚಳವಳಿಗೆ ಧುಮುಕಲು ಈ ರೀತಿ ದಲಿತರನ್ನು ಹಾಡುಗಳ ಮುಖಾಂತರ ಹುರಿದುಂಬಿಸುತ್ತಿದ್ದರು.

ಇಲ್ಲಿ ದಲಿತ ಸಂಘರ್ಷ ಸಮಿತಿಯ ನೇತೃತ್ವವನ್ನು ಸಿ.ದಾನಪ್ಪ, ಆಂಜನೇಯ್ಯ, ಮಾನಸಯ್ಯ, ಹನುಮಂತಪ್ಪ ಇನ್ನೂ ಮುಂತಾದವರು ವಹಿಸಿದ್ದರು. ೧೯೮೩-೮೪ರಲ್ಲಿ ನಡೆದ ಈ ಭೂ-ಹೋರಾಟ ಇಡೀ ಕರ್ನಾಟಕದಲ್ಲಿ ಹೆಸರು ಗಳಿಸಿದ ಭೂ-ಹೋರಾಟವಾಯಿತು. ಪ್ರಮುಖವಾಗಿ ಮೆದಕಿನಾಳ ಗ್ರಾಮದ ಲಿಂಗಾಯಿತರು, ಗೌಡರು, ಒಕ್ಕಲಿಗರು ಹಾಗೂ ಬಂಡಾವಾಳಶಾಹಿಗಳ ವಿರುದ್ಧ ಹೋರಾಟಕ್ಕಿಳಿದ ಈ ದಲಿತ ಸಂಘರ್ಷ ಸಮಿತಿಯು ಅವರ ಅಧೀನದಲ್ಲಿದ್ದ ಸುಮಾರು ೬೭ ಎಕರೆ ಭೂಮಿಯನ್ನು ವಶಪಡಿಸಿಕೊಂಡರು. ೧೭.೫.೧೯೮೭ರಲ್ಲಿ ಇದನ್ನು ಸಹಿಸದ ಭೂಮಾಲೀಕರು ಮಹೇಂದ್ರಬಾಬು, ಅವನ ಸಹಚಾರ ರುದ್ರಸ್ವಾಮಿ, ಮಂಡಲ ಪ್ರಧಾನ ಲಿಂಗರಾಜು ಅವರು ಪ್ರಗತಿಪರ ಆಡಳಿತ ನಡೆಸುತ್ತಿದ್ದ ಜನತಾದಳ ಪಕ್ಷದ ನಂತರ ಸಾಮಾಜಿಕ ಬಹಿಷ್ಕಾರಕ್ಕೆ ಬೆಂಬಲಿಸಿದರೆ ಹೊರತು ದಲಿತರಿಗೆ ಯಾವುದೇ ನ್ಯಾಯಿಕ ರಕ್ಷಣೆಯನ್ನು ಕೊಡಲಿಲ್ಲ. ಅಲ್ಲದೆ ಮೂಲಭೂತ ಹಕ್ಕುಗಳಾದ ರಸ್ತೆಯಲ್ಲಿ ಓಡಾಡುವುದು, ಸಾರ್ವಜನಿಕ ಅಂಗಡಿಯಲ್ಲಿ ಕೊಳ್ಳುವುದು ಯಾವುದಕ್ಕೂ ಬೆಲೆ ಸಿಗಲಿಲ್ಲ. ಇಲ್ಲಿ ಇತರೆ ಜಾತಿಯವರು

ಈ ಸಾಮಾಜಿಕ ಬಹಿಷ್ಕಾರವನ್ನು ತಪ್ಪಿಸಿಕೊಂಡರೇ ಹೊರತು, ಅಸ್ಪೃಶ್ಯರು ಸಿಕ್ಕಿ ಹಾಕಿಕೊಳ್ಳಬೇಕಾಯಿತು. ಏಕೆಂದರೆ ಜನರ ಪ್ರಗತಿಪರ ಚಿಂತನೆಯ ತುಡಿತವನ್ನು ಕಳೆದುಕೊಂಡರಲ್ಲದೇ ಮೂಲ ರಚನೆಗೆ ಜೋತು ಬಿದ್ದರು (ಚಾಂಡಾಳ, ೧೯೯೨: ೬೯).

ಇಂತಹ ಸಾಮಾಜಿಕ ಬಹಿಷ್ಕಾರವನ್ನು ತೊಡೆದು ಹಾಕಿ ಭೂಮಾಲೀಕರ ವಿರುದ್ಧ ಹೋರಾಟಕ್ಕಿಳಿದವರು ಮೆದಕಿನಾಳ ಗ್ರಾಮದವರು ಎಂದು ಹೇಳಿದರೆ ತಪ್ಪಾಗಲಾರದು. ಈ ಹೋರಾಟವು ಈ ಪ್ರದೇಶದಲ್ಲಿ ಪ್ರಮುಖ ಮತ್ತು ಪ್ರೇರಣಾ ಚಳವಳಿ ಎಂದು ಕರೆಯಬಹುದು.

## ಮಹಮ್ಮದ್ ನಗರ ಭೂಹೋರಾಟ

ಕರ್ನಾಟಕ ಕಂಡ ಅತ್ಯಂತ ಪ್ರಮುಖ ಹೋರಾಟಗಳಲ್ಲಿ ಈ ಭೂಹೋರಾಟವು ಒಂದು. ಇದು ರಾಜಕೀಯ ಪಕ್ಷಗಳ ನಾಯಕರ ಚಿಂತನೆಗಳಿಂದ ಮೂಡಿಬಂದುದಲ್ಲ. ಇದರಲ್ಲಿ ವಿಚಾರವಂತರು, ಬುದ್ಧಿಜೀವಿಗಳು ಮತ್ತು ಅವರ ಚಿಂತನೆಗಳಿಂದ ಈ ಭೂಹೋರಾಟವು ಹುಟ್ಟಿಕೊಂಡಿತು. ೧೯೫೨ರಲ್ಲಿ ನಡೆದ ಕಾಗೋಡು ಸತ್ಯಾಗ್ರಹದಂತಹ ಸಮಾಜವಾದಿ ಚಳವಳಿಗಳು ಈ ಭೂಹೋರಾಟಕ್ಕೆ ಸ್ಫೂರ್ತಿಯಾದವು. ಪರಿಣಾಮವಾಗಿ ಮಹಮದ್ ನಗರದ ಪ್ರಗತಿಪರ ರೈತರು ತಮ್ಮ ನ್ಯಾಯಯುತವಾದ ಬೇಡಿಕೆಗಾಗಿ ಭೂಮಾಲೀಕರ ವಿರುದ್ಧ ಹೋರಾಟಕ್ಕಿಳಿದರು. ಇದರಲ್ಲಿ ದಲಿತ ಸಂಘರ್ಷ ಸಮಿತಿ ನಾಯಕರು ಮತ್ತು ರೈತರು ಹೋರಾಟಕ್ಕೆ ಬೆಂಬಲ ಸೂಚಿಸಿದರು.

ಕೊಪ್ಪಳ ತಾಲ್ಲೂಕಿನ ಬಸಾಪೂರ, ಶಿವಪುರ, ಬಂಡಿ, ಹರ್ಲಾಪುರ, ಹತ್ತಿ ನಾರಾಯಣ ಪೇಟೆ, ರಾಜಾರಾಮಪೇಟೆ ಮತ್ತು ಮಹಮದ್‌ನಗರ ಗ್ರಾಮಗಳಿಗೆ ಸೇರಿದ ಜನರು ಈ ಭೂಮಿಯಲ್ಲಿ ದುಡಿಯುತ್ತಿದ್ದಾರೆ. ಆದರೆ ಆ ಭೂಮಿಯ ಒಡೆತನ ಅವರದ್ದಲ್ಲ. ಅವರ ಮಾಲಿಕ ರಾಜಸ್ಥಾನದಿಂದ ಬಂದು ಒಡೆಯನಾಗಿ ಸಕ್ಕರೆ ಕಾರ್ಖಾನೆಯನ್ನು ಸಹ ನಡೆಸುತ್ತಿರುವ ಸುಶೀಲಬಾಬು ಮರಾರ್ಕ್. ಅವನು ೧೯೫೪ರಲ್ಲಿ ಸರಕಾರದಿಂದ ಲೀಸ್ ಪಡೆದಿರುವುದು ಒತ್ತುವರಿ ಮಾಡಿಕೊಂಡಿರುವುದು ಎಲ್ಲ ಸೇರಿ ೩೭೭೦ ಎಕರೆ ೧೯೮೫ರಲ್ಲಿ ದಲಿತ ಸಂಘರ್ಷ ಸಮಿತಿಯು ಈ ಕೇಸನ್ನು ತೆಗೆದುಕೊಂಡಿತು (ಚಾಂಡಾಳ, ೧೯೯೨: ೬೯).

ಕಾರ್ಖಾನೆಗೆ ಅವಶ್ಯವಾಗಿ ಬೇಕಾದಷ್ಟು ಭೂಮಿ ಬಿಟ್ಟು ಉಳಿದ ಭೂಮಿ ಬಡವರಿಗೆ ಹಂಚುವಂತೆ ಆಗಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಮತ್ತು ಬೊಮ್ಮಾಯಿಯವರನ್ನು ಘೇರಾವ್ ಮಾಡಲಾಯಿತು. ವಿವಿಧ ಜಾತಿ ಧರ್ಮಗಳಿಗೆ ಸೇರಿದ ಕೂಲಿಕಾರರು ಗೇಣಿದಾರರು ಒಂದಾಗಿ ಹೋರಾಟಕ್ಕಿಳಿದರು. ಇದರಿಂದ ದಲಿತ ಸಂಘರ್ಷ ಸಮಿತಿಯು ಇವರ ನೇತೃತ್ವದಲ್ಲಿ ಹೋರಾಟವನ್ನು ಮಾಲೀಕರ ವಿರುದ್ಧ ಮಾಡಿದರು. ಈ ಕಾರಣದಿಂದಾಗಿ ಕುಪಿತಗೊಂಡ ಸುಶೀಲಬಾಬು ದಿನಾಂಕ ೧೫-೧-೧೯೮೭ರಂದು ಒತ್ತುವರಿ ಮಾಡಿ ಮನೆ ಕಟ್ಟಿಕೊಂಡಿದ್ದ ಸ್ಥಳದಲ್ಲಿ ಬಾಂಬ್ ಸ್ಫೋಟಕ್ಕೆ ೨೦ ಮೇಕೆ, ೯೩ ಗುಡಿಸಲು

## ಮಹಮ್ಮದ್ ನಗರದಲ್ಲಿ ನಡೆದ ಭೂಹೋರಾಟ




ಆಕರ ಸ್ಫೂರ್ತಿ : ತುಕಾರಾಂ ಎಸ್. ಮತ್ತು ರಾಜು ಬಿ., ಸಾಕ್ಷರತಾ ದಾರಿಯ ಸಾವಿರ ಹೆಜ್ಜೆ (ಕರ್ನಾಟಕ ರಾಜ್ಯ ಸಾಕ್ಷರತಾ ಆಂದೋಲನದ ದಶಕದ ಸಾಧನೆಗಳು), ನಿರ್ದೇಶಕರು, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು, ೨೦೦೦, ಪು.೪೩

ಸುಟ್ಟು ಬೂದಿಯಾದವು. ಮಲ್ಲಯ್ಯಸ್ವಾಮಿ ಮುಕ್ತುಂಸಾಬ ಅವರು ಕೈಗಳನ್ನು ಕಳೆದುಕೊಂಡರು. ರಾಂಜಿ ಲಮಾಣಿ ನಾಯಕನ ತಲೆಗೆ ಅಪಾಯಕರ ಹೊಡೆತ ಬಿತ್ತು. ಮನೆಗಳಲ್ಲಿದ್ದ ಮಕ್ಕಳು ಹೆಂಗಸರು ಬಾಣಂತಿಯರನ್ನು ಹೊರಗೆ ಹಾಕಿ ಸುಟ್ಟರು (ಚಾಂಡಾಳ, ೧೯೯೨: ೭೦).

ಗುಡಿಸಲುಗಳಲ್ಲಿದ್ದ ಎಲ್ಲ ವಸ್ತುಗಳು, ಬಟ್ಟೆಬರೆಗಳು, ಭತ್ತ ಇತರೆ ದವಸಧಾನ್ಯ, ಸಾವಿರಾರು ನಗದು ನೋಟುಗಳು ಸುಟ್ಟು ಬೂದಿಯಾದವು. ಭೂಕಾಯ್ದೆಯಂತೆ ಕಾರ್ಖಾನೆಗೆ ೫೦ ಎಕರೆ ಮಾತ್ರ ಜಮೀನು ಪಡೆಯಬಹುದು. ಉಳಿದ ಉಳುವ ಭೂಮಿಯನ್ನು ರೈತರಿಗೆ ಸಾಗುವಳಿಗೆ ಕೊಡಿ ಎಂದು ಚಳವಳಿ ನೇತೃತ್ವ ವಹಿಸಿತು.

ಇದರ ಪರಿಣಾಮವಾಗಿ ಇದಕ್ಕೆ ೧೯೮೩ರಲ್ಲಿ ಸರಕಾರಿ ಕಾನೂನು ಉಲ್ಲಂಘಿಸಿದಕ್ಕಾಗಿ ಭೂ ನ್ಯಾಯಮಂಡಲಿ ಆ ಭೂಮಿಯನ್ನು ಸರಕಾರದ್ದೆಂದು ತೀರ್ಪು ನೀಡಿತು. ಸುಶೀಲಬಾಬು ರಚಿಸಿಕೊಂಡಿದ್ದ 'ಕೋಆಪರೇಟಿವ್ ಫಾರ್ಮಿಂಗ್ ಸೊಸೈಟಿ(ಲಿ) ಅನ್ನು ಲಿಕ್ವಿಡೇಟ್ ಮಾಡಿತು. ಇದರ ವಿರುದ್ಧ ಸ್ಟೇ ತಂದಿದ್ದು ಇಲ್ಲಿಯವರೆಗೂ ಆ ಸ್ಟೇ ವಜಾ ಆಗಿಲ್ಲ. ಹೋರಾಟ ಕೋರ್ಟಿನ ಕಟಕಟೆಗೆ ಬಂದಿದೆ (ಚಾಂಡಾಳ, ೧೯೯೨: ೭೦).

ದಲಿತ ಸಂಘರ್ಷ ಸಮಿತಿಯು ಈ ಹೋರಾಟದಲ್ಲಿ ಭಾಗಿಯಾಯಿತು. ಭೂಮಿ ಹಕ್ಕಿಗಾಗಿ ನಡೆದ ಈ ಚಳವಳಿ ಸಂದರ್ಭದಲ್ಲಿ ಈ ಜಾಗದಲ್ಲಿ ದಲಿತರ ಗುಡಿಸಲುಗಳು ಸುಟ್ಟು ಹೋದವು. ૩೭೭ ಎಕರೆಯಲ್ಲಿ ದಲಿತರು ಕೆಲಸ ಮಾಡುತ್ತಿದ್ದಾರೆ. ಆದರೆ ಪರಿಣಾಮವಾಗಿ ಇಂದಿಗೂ ಕೂಡ ಭೂಮಿ ಸಂಬಂಧ ತಡೆಯಾಜ್ಞೆ ತರಲಾಯಿತು.

ಇದರ ಪರಿಣಾಮವಾಗಿ ಜನತೆಗೆ ಯಾವುದೇ ನ್ಯಾಯ ಸಿಗಲಿಲ್ಲ. ಜನರು ಮತ್ತು ಮಾಲೀಕರು ಇಂದಿಗೂ ಕೂಡ ಕೋರ್ಟ್‌ಗೆ ಹೋಗುವುದನ್ನು ಕಾಣಬಹುದು. ನ್ಯಾಯಾಲಯದಿಂದ ಇದರ ಬಗ್ಗೆ ಸ್ಪಷ್ಟವಾದ ತೀರ್ಪು ನೀಡಿ ಇಲ್ಲಿನ ಜನತೆ ಭೂ ಹಕ್ಕಿನ ಪ್ರಶ್ನೆಯನ್ನು ತೆಗೆದುಕೊಂಡು ಭೂ ಸುಧಾರಣೆಯನ್ನು ಸಂಪೂರ್ಣ ಜಾರಿಗೆ ತರಬೇಕೆಂದು ಸರಕಾರಕ್ಕೆ ಮನವಿ ಸಲ್ಲಿಸಿದ್ದುಂಟು. ಆದರೆ ಸರಕಾರವು ಯಾವುದೇ ಕ್ರಮ ತೆಗೆದುಕೊಂಡಿಲ್ಲ. ಅಲ್ಲದೆ ಜನತೆಯ ಪರಿಸ್ಥಿತಿ ಕಷ್ಟಕರವಾಗಿದ್ದು, ಅವರಿಗೆ ನ್ಯಾಯ ಒದಗಿಸಿಕೊಡಬೇಕೆಂದು ಇಲ್ಲಿನ ರೈತ ಸಂಘಟನೆ ಮತ್ತು ದಲಿತ ಸಂಘರ್ಷ ಸಮಿತಿಯ ಕೂಗಾಗಿದೆ (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯.೦೨.೨೦೦೭).[೩]

## ಗೆಜ್ಜಲಗಟ್ಟ ಭೂಹೋರಾಟ

ರಾಯಚೂರು ಪ್ರದೇಶದ ಲಿಂಗಸೂಗೂರು ತಾಲ್ಲೂಕಿನಲ್ಲಿ ಬರುವ ಗೆಜ್ಜಲಗಟ್ಟ ಎಂಬ ಗ್ರಾಮದಲ್ಲಿ ದಲಿತ ಸಂಘರ್ಷ ಸಮಿತಿಯು ಭೂಹೋರಾಟದ ದೊಡ್ಡ ಚಳವಳಿ ನಡೆಯಿತು. ಇದು ತುಂಗಭದ್ರೇಶ್ವರಿ ಎಂಬ ಒಕ್ಕಲಿಗರ ಮನೆತನದ ವಿರುದ್ಧ ನಡೆದ ಹೋರಾಟ. ಏಕೆಂದರೆ ಈ ಮನೆತನವು

೫೦-೬೦ ಎಕರೆ ಭೂಮಿಯನ್ನು ತಮ್ಮ ಅಧೀನದಲ್ಲಿದ್ದ ದಲಿತರ ಮೂಲಕ ದುಡಿಸಿಕೊಳ್ಳುತ್ತಿದ್ದರು. ಅವರಿಗೆ ಸರಿಯಾದ ಕೂಲಿ ಕೊಡದೆ ಶೋಷಣೆ ಮಾಡುತ್ತಿದ್ದರು. ಇದನ್ನು ದಲಿತ ಸಂಘರ್ಷ ಸಮಿತಿಯು ಖಂಡಿಸಿದ್ದಲ್ಲದೇ ಇವರ ವಿರುದ್ಧ ಹೋರಾಟ ಮಾಡಿತು. ಇದರ ಪರಿಣಾಮವಾಗಿ ೫೦-೬೦ ಎಕರೆ ಭೂಮಿಯನ್ನು ದಲಿತರಿಗೆ ವ್ಯವಸಾಯ ಮಾಡಲು ಕೊಡಲಾಯಿತು (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯.೦೨.೨೦೦೭).

ಮೆದಕಿನಾಳ ಹೋರಾಟದ ಪರಿಣಾಮದಿಂದ ಈ ಗೆಜ್ಜಲಗಟ್ಟ ಭೂಹೋರಾಟವು ಕೂಡ ತುಂಗಭದ್ರೇಶ್ವರಿ ಎಂಬ ಶ್ರೀಮಂತ ಮಹಿಳೆಯ ವಿರುದ್ಧ ದಲಿತ ಸಂಘರ್ಷ ಸಮಿತಿ ಮತ್ತು ರೈತ ಸಂಘಟನೆಗಳು ಹೋರಾಡಿ ಶ್ರೀಮಂತಶಾಹಿ ಒಡೆತನವನ್ನು ನಿರ್ನಾಮ ಮಾಡಿದರು. ಕಾರಣ, ಇಲ್ಲಿನ ದಬ್ಬಾಳಿಕೆಯ ವಿರುದ್ಧ ದಲಿತ ಸಂಘರ್ಷ ಸಮಿತಿ ಹೋರಾಡಿ ದಲಿತರಿಗೆ ಸುಮಾರು ೫೦ರಿಂದ ೬೦ ಎಕರೆ ಭೂಮಿ ದೊರಕಿಸಿಕೊಡುವಲ್ಲಿ ಈ ಸಂಘಟನೆಗಳ ಪಾತ್ರ ತುಂಬಾ ಮಹತ್ವದ್ದಾಗಿದೆ. ಇದರಿಂದ ಇಲ್ಲಿನ ದಲಿತರು ಇಂದಿಗೂ ತಮ್ಮ ಭೂಮಿಯಲ್ಲಿ ವ್ಯವಸಾಯ ಮಾಡಿ ಜೀವನ ಸಾಗಿಸುತ್ತಿರುವುದನ್ನು ನಾವು ಕಾಣಬಹುದು (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯.೦೨.೨೦೦೭).

### ಇತರ ಹೋರಾಟಗಳು

ದಲಿತ ಸಂಘಟನೆಯು ದಲಿತರಲ್ಲದೇ ಇತರೇ ಹೋರಾಟಗಳಲ್ಲಿ ಪಾಲ್ಗೊಂಡಿದೆ. ಅವುಗಳಲ್ಲಿ ಪ್ರಮುಖವಾಗಿ ದೇವದಾಸಿ ಪದ್ಧತಿಯನ್ನು ಹೋಗಲಾಡಿಸಿದ್ದು ಒಂದು. ೧೯೭೯ರಲ್ಲಿ ಚಂದ್ರಗುತ್ತಿಯಲ್ಲಿ ದೇವದಾಸಿ ಪದ್ಧತಿಯನ್ನು ಹೋಗಾಲಾಡಿಸಲಾಗಿದೆ. ಸವದತ್ತಿಯಲ್ಲಿ ಮತ್ತು ಅರೋಲಿಯ, ನೀರಮಾನ್ವಿ ಜಾತ್ರೆಯಲ್ಲಿ ದಲಿತ ಸಂಘರ್ಷ ಸಮಿತಿಯ ಹೋರಾಟದ ಪರಿಣಾಮವಾಗಿ ದೇವವಾಸಿ ಪದ್ಧತಿಯನ್ನು ರದ್ದುಪಡಿಸಲಾಯಿತು. ಇದೂ ಕೂಡ ದಲಿತ ಸಂಘರ್ಷ ಸಮಿತಿ ಸಾಧಿಸಿದ ಸಾಮಾಜಿಕ ಚಳವಳಿಯ ಯಶಸ್ಸು ಎನ್ನಬಹುದು. ಇದರ ಜೊತೆಗೆ ಮಸ್ಕಿ ಸಂಗೀತ ಮತ್ತು ಪಲ್ಲವಿಯ ಕೊಲೆ ವಿರುದ್ಧ ದಲಿತ ಸಂಘರ್ಷ ಸಮಿತಿ ಹೋರಾಟ ಮಾಡಲಾಗಿದೆ ಎಂದು ಹೇಳಬಹುದು (ಸಂದರ್ಶನ : ದಾನಪ್ಪ ಸಿ., ೦೪.೦೩.೨೦೦೭). ದಲಿತ ಚಳವಳಿ ಬೃಹತ್ ಶಕ್ತಿಯಾಗಿ ರೂಪುಗೊಂಡಿದೆ ಎಂಬುದನ್ನು ಅದು ರಾಜ್ಯ ಮಟ್ಟದ ಪ್ರದರ್ಶನ, ಪ್ರತಿಭಟನೆ ಅಥವಾ ಸಮಾವೇಶಗಳನ್ನು ನಡೆಸಿದಾಗ ಅರ್ಥ ಮಾಡಿಕೊಳ್ಳಬಹುದಾಗಿತ್ತು. ಅಂತಹ ಶಕ್ತಿ, ಸಾಮರ್ಥ್ಯವನ್ನು ದಲಿತ ಸಂಘರ್ಷ ಸಮಿತಿ ನಾಯಕರು ಮತ್ತು ಅವರಿಗೆ ನೆರವಾಗಿ ನಿಂತ ಬುದ್ಧಿಜೀವಿಗಳು ತುಂಬ ತೊಡಗಿದ್ದರು. ಶೋಷಣೆ, ದೌರ್ಜನ್ಯ, ಅತ್ಯಾಚಾರ ಮತ್ತು ಹತ್ಯೆ ಪ್ರಕರಣಗಳ ವಿರುದ್ಧ ಸೆಟೆದು ನಿಂತ ದಲಿತ ಸಂಘರ್ಷ ಸಮಿತಿಯ ಸಂಘಟನೆ ಒಂದೆಡೆ ಅವುಗಳನ್ನು ನಿಗ್ರಹಿಸುವ ಶಕ್ತಿಯಾಗಿ ರೂಪುಗೊಂಡಿದ್ದರೆ, ಮತ್ತೊಂದೆಡೆ ಈ ಸಂಘಟನೆ ಮತ್ತು ಪ್ರತಿಭಟನೆಯ ಕಾರಣಗಳಿಂದಾಗಿಯೇ ಮತ್ತಷ್ಟು ದೌರ್ಜನ್ಯ ಹತ್ಯಾಕಾಂಡಗಳು ಹೆಚ್ಚುತ್ತಿದ್ದವು (ಜಾಣಗೆರೆ, ೨೦೦೫: ೭೯).

# ಗೆಜ್ಜಲಗಟ್ಟ ಗ್ರಾಮದಲ್ಲಿ ನಡೆದ ಭೂ ಹೋರಾಟ




ಆಕರ ಸ್ಫೂರ್ತಿ : ತುಕಾರಾಂ ಎಸ್. ಮತ್ತು ರಾಜು ಬಿ., ಸಾಕ್ಷರತಾ ದಾರಿಯ ಸಾವಿರ ಹೆಜ್ಜೆ (ಕರ್ನಾಟಕ ರಾಜ್ಯ ಸಾಕ್ಷರತಾ ಆಂದೋಲನದ ದಶಕದ ಸಾಧನೆಗಳು), ನಿರ್ದೇಶಕರು, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು, ೨೦೦೦, ಪು.೪೩

ಹೀಗೆ ದಲಿತ ಸಂಘರ್ಷ ಸಮಿತಿಯು ರಾಯಚೂರು ಪ್ರದೇಶದಲ್ಲಿ ಶೋಷಿತರ, ದಲಿತರ ಮತ್ತು ಮಹಿಳಾ ಸಮಸ್ಯೆಗಳ ಪರ ಹಾಗೂ ಜಾತಿ, ಜೀತಪದ್ಧತಿಯಂತಹ ಅನಿಷ್ಟ ಪದ್ಧತಿಗಳ ವಿರುದ್ಧ ಹೋರಾಟಗಳು ಮಾಡಿದೆ.

ದಲಿತ ಸಂಘರ್ಷ ಸಮಿತಿಯು ದಲಿತರ ಏಳಿಗೆಗಾಗಿ ಹುಟ್ಟಿಕೊಂಡಿದೆ. ಅಂಬೇಡ್ಕರ್ ತತ್ವದ ಪರವಾಗಿ ನಿಂತ ಈ ದಲಿತ ಸಂಘರ್ಷ ಸಮಿತಿ ಉಳ್ಳವರ ವಿರುದ್ಧ, ಶೋಷಣೆಯ ಪರವಾಗಿ ಈ ತನ್ನ ಕೆಲಸ ಕಾರ್ಯಗಳನ್ನು ಮಾಡಿದೆ. ಅದರಂತೆ ರಾಯಚೂರು ಪ್ರದೇಶದಲ್ಲಿ ದಲಿತ ಸಂಘರ್ಷ ಸಮಿತಿಯು ತನ್ನ ಕಾರ್ಯಕ್ರಮಗಳನ್ನು ದಲಿತರ ಏಳ್ಗೆಗಾಗಿ ಮಾಡಿದೆ. ರಾಯಚೂರು ಪ್ರದೇಶದಲ್ಲಿ ದಲಿತ ಚಳವಳಿಯು ಸಮಾಜದ ಮೇಲೆ ಪರಿಣಾಮ ಬೀರಿ ದಲಿತರು ಇಂದು ಸ್ವಾಭಿಮಾನಿಗಳಾಗಿದ್ದಾರೆ. ದಲಿತ ಚಳವಳಿ ರಾಯಚೂರಲ್ಲಿ ಒಂದು ಪ್ರಮುಖವಾದ ಚಳವಳಿಯಾಗಿದೆ.

## ಮಾದಿಗ ಚಳವಳಿ

ಕರ್ನಾಟಕದಲ್ಲಿ ನಡೆಯುತ್ತಿರುವ ಮಹತ್ತರ ಚಳವಳಿಗಳಲ್ಲಿ ಮಾದಿಗ ಚಳವಳಿಯು ಒಂದು. ಈ ಚಳುವಳಿ ಸಮಾಜದ ಮೇಲೆ ಪ್ರಭಾವ ಬೀರಿದೆ. ಏಕೆಂದರೆ 'ಮೀಸಲಾತಿಯಲ್ಲಿ ಮೀಸಲಾತಿ' ಎಂಬ ತತ್ವದಡಿಯಲ್ಲಿ ಸಿಗಬೇಕಾದ ಸವಲತ್ತುಗಳಿಗಾಗಿ ಇಂದೂ ಮಾದಿಗ ಚಳವಳಿ ಭರಾಟೆಯಿಂದ ಇಡೀ ಕರ್ನಾಟಕದ ತುಂಬ ನಡೆದಿದೆ. ರಾಯಚೂರು ಜಿಲ್ಲೆಯಲ್ಲಿ ಕೂಡ ಈ ಮಾದಿಗ ಚಳವಳಿ ತುಂಬಾ ಭರಾಟೆಯಿಂದ ನಡೆದ ಚಳವಳಿಯಾಗಿದೆ.

ಪ್ರಸ್ತುತ ಅಧ್ಯಾಯದ ಈ ಭಾಗದಲ್ಲಿ, ಆಂಧ್ರಪ್ರದೇಶದಲ್ಲಿ ನಡೆದ ಮಾದಿಗ ಚಳವಳಿಯ ಸ್ವರೂಪವನ್ನು, ಕರ್ನಾಟಕದಲ್ಲಿ ಮಾದಿಗ ಚಳವಳಿಗಳು ಪ್ರವೇಶ ಪಡೆದಿರುವ ವಿವರಗಳನ್ನು ಮತ್ತು ರಾಯಚೂರಿನ ಪ್ರದೇಶಗಳಲ್ಲಿ ಇವುಗಳ ಪ್ರಭಾವವನ್ನು ಅಭ್ಯಸಿಸಲು ಯತ್ನಿಸಲಾಗಿದೆ. ಈ ಭಾಗದಲ್ಲಿ ರಾಯಚೂರಿನಲ್ಲಿ ನಡೆದ ಮಾದಿಗ ಚಳವಳಿಯ ಸ್ವರೂಪವನ್ನು, ಲಕ್ಷಣಗಳನ್ನು ಹೋರಾಟದ ವಿವರಗಳನ್ನು, ಸಂಘಟನೆಯ ರೂಪರೇಷೆಗಳನ್ನು ವಿವರಿಸಲು ಯತ್ನಿಸಲಾಗಿದೆ.

*** *** ***

ದಲಿತರಲ್ಲಿ ದಲಿತರಾದ ಪಂಚಮರು, ಅಸ್ಪೃಶ್ಯರಲ್ಲಿ ಅಸ್ಪೃಶ್ಯರಾದ ಮಾದಿಗರು ಮಾತ್ರ ತಲಾತಲಾಂತರಗಳಿಂದ ದಣಿಗಳ, ಗೌಡರ, ಆಧಿಪತ್ಯಕ್ಕೆ ಒಳಗಾಗಿದೆ. ಆಳುವ ಸರ್ಕಾರದ ಹಗಲು ದರೋಡೆಗೆ ಗುರಿಯಾಗಿ ದಿನದಿನಕ್ಕೂ ಈ ಜನಾಂಗದ ಬದುಕು ಕತ್ತಲೆಯಿಂದ ಕೂಡಿದೆ.

ಮಾದಿಗರು ಇಂದು ಪರಿಶಿಷ್ಟರಲ್ಲಿ ಶೇ.೫೭.೨ರಷ್ಟು ಇದ್ದರೂ ಅವರಿಗೆ ಸಿಗಬೇಕಾದ ಸೌಲಭ್ಯ ಸಿಗುತ್ತಿಲ್ಲ. ಅದರಂತೆಯೇ ರಾಯಚೂರು ಪ್ರದೇಶದಲ್ಲಿ ಸುಮಾರು ಪರಿಶಿಷ್ಟರಲ್ಲಿ ಶೇಕಡಾ ೭೦ರಿಂದ

೭೫ರಷ್ಟು ಇರುವ ಮಾದಿಗರಿಗೆ ಯಾವುದೇ ರೀತಿಯಾದ ಸೌಲಭ್ಯಗಳು ಸಿಗುತ್ತಿಲ್ಲ. ಇಂತಹ ಸೌಲಭ್ಯಗಳಿಗಾಗಿ ಮತ್ತು ಮಾದಿಗ ಜಾತಿಯ ಅಭಿವೃದ್ಧಿಗಾಗಿ ಕರ್ನಾಟಕ ರಾಜ್ಯದಲ್ಲಲ್ಲದೇ ರಾಯಚೂರು ಪ್ರದೇಶದಲ್ಲಿ ಕೂಡ ಈ ಚಳವಳಿ ತುಂಬಾ ತೀವ್ರತೆಯಲ್ಲಿದೆ (ಮಹೇಶ್, ೨೦೦೨: ೨೦).

''ಡಂಗುರ ಸಾರುತ್ತಿದ್ದೇವೆ, ಜಾತೀಯತೆ ತುಂಬಿರುವ ಈ ದೇಶದಲ್ಲಿ ಮಾದಿಗರಿಗೆ ಅನ್ಯಾಯವಾಗಿದೆ ಎಂದು... ಡಂಗುರ ಸಾರುತ್ತಿದ್ದೇವೆ. ನಮಗೆ ಪ್ರತ್ಯೇಕ ಮೀಸಲಾತಿ ಕೊಡಿ ಎಂದು'' ಎಂಬ ಘೋಷಣೆಯೊಡನೆ 'ದಂಡೋರ' ವೃತ್ತಿ ನೆಲೆಯ ಆಶಯವನ್ನು ಮಾದಿಗ ಜನಾಂಗ ತನ್ನ ಹೋರಾಟಕ್ಕೂ ಅನ್ವಯಿಸಿಕೊಳ್ಳುತ್ತಿರುವುದು ಗಮನಾರ್ಹ (ತೆಲಗಾವಿ, ೧೯೯೯: ೧೪೭).

ಈ ಮಾದಿಗ ಚಳವಳಿಯ ನಾಯಕರು ಜೆ.ಬಿ.ರಾಜು, ನರೇಶ ಮಾಸ್ಟರ, ಆರ್.ಬಾಬು, ಶಿವಪುತ್ರಪ್ಪ ಬೇರಿ, ಡಿಂಗ್ರಿ ನರಸಪ್ಪ ಇನ್ನು ಮುಂತಾದವರು. ಮೀಸಲಾತಿ ಇಲ್ಲದ ಖಾಸಗೀಕರಣ ಸಂವಿಧಾನಬಾಹಿರವೆಂಬುದನ್ನು ಮೀಸಲಾತಿಯ ಫಲಾನುಭವಿಗಳು ಈ ರೋಗಗ್ರಸ್ಥ ಸಮಾಜಕ್ಕೆ ಆಳುವ ಸರ್ಕಾರಕ್ಕೆ ಇಂದು ಎಚ್ಚರಿಕೆ ನೀಡಬೇಕಾಗಿದೆ (ವೀರಯ್ಯ, ೨೦೦೫: ೪೪).

ಮಾದಿಗರು ಪ್ರತಿ ಕ್ಷೇತ್ರದಲ್ಲೂ ಯಾವುದೇ ಮೀಸಲಾತಿ ಪಡೆಯುತ್ತಿಲ್ಲ. ಈ ಮೀಸಲಾತಿಯ ಲಾಭವನ್ನು ಕಡಿಮೆ ಜನಸಂಖ್ಯೆ ಹೊಂದಿರುವ ಬೇರೆ ಜಾತಿ ಪಡೆಯುತ್ತಿರುವುದು ಇಂದು ಮಾದಿಗರಿಗೆ ನುಂಗಲಾರದ ತುತ್ತಾಗಿದೆ. ಆದುದರಿಂದ ಈ ಚಳವಳಿ ಭರಾಟೆಯಿಂದ ನಡೆದಿದೆ (ಸಂದರ್ಶನ : ರಾಜು ಜೆ.ಬಿ., ೨೦.೦೨.೨೦೦೭).

ಕರ್ನಾಟಕ ರಾಜ್ಯದಲ್ಲಿ ಹಾವನೂರು ವರದಿಯ ಪ್ರಕಾರ ಶೇ.೫೭.೨ರಷ್ಟು ಮಾದಿಗರಿದ್ದಾರೆ. ಇಡೀ ಕರ್ನಾಟಕದಲ್ಲಿ ಪರಿಶಿಷ್ಟ ಜಾತಿಯಲ್ಲಿ ಇಷ್ಟು ಮಾದಿಗರು ಇದ್ದಾರೆ. ರಾಯಚೂರು ಪ್ರದೇಶದ ಶೇ.೭೦ ರಿಂದ ೭೫ರಷ್ಟು ಮಾದಿಗರು ಈ ಪ್ರದೇಶದಲ್ಲಿ ಇದ್ದಾರೆ. ಇದರಿಂದ ಇಲ್ಲಿ ಮಾದಿಗರು ತಮ್ಮ ಮೀಸಲಾತಿಗಾಗಿ ತೀವ್ರ ಪೈಪೋಟಿಯನ್ನು ಚಳವಳಿಗಳ ಮುಖಾಂತರ ಮಾಡುತ್ತಿದ್ದಾರೆ.

ಕಿತ್ತುಕೊಂಡು ತಿನ್ನುವುದು ಜಗಳವೆನಿಸಿದರೆ, ಹಂಚಿಕೊಂಡು ತಿನ್ನುವುದು ಅಸ್ತಿತ್ವಕ್ಕಾಗಿ ಹೋರಾಟ ಎನಿಸುವುದು. ಅಸ್ತಿತ್ವದ ಹೋರಾಟಕ್ಕಾಗಿ (ಹಂಚಿಕೊಂಡು ತಿನ್ನುವುದಕ್ಕಾಗಿ) ಹುಟ್ಟಿರುವುದೇ ಮೀಸಲಾತಿ ವರ್ಗೀಕರಣದ 'ಹೋರಾಟವಾಗಿದೆ', ''ಶೋಷಿತರೆಲ್ಲ ಸಮಾನವಾಗಿ ಹಂಚಿಕೊಂಡು ತಿನ್ನಬೇಕು.'' ಎಂಬುದು ಅಂಬೇಡ್ಕರ್ ಹುಟ್ಟುಹಾಕಿದ ಮೀಸಲಾತಿಯ ಮೂಲ ಧ್ಯೇಯವಾಗಿದೆ'' (ಸಂದರ್ಶನ : ರಾಜು ಜೆ.ಬಿ., ೨೦.೦೨.೨೦೦೭). ರಾಯಚೂರು ಪ್ರದೇಶದಲ್ಲಿ ನಡೆದ ಈ ಮಾದಿಗ ಚಳವಳಿ ಯಾವ ರೀತಿ ಹುಟ್ಟಿಕೊಂಡಿತು ಮತ್ತು ಅದರ ಬೆಳವಣಿಗೆ ಕುರಿತು ಈ ಕೆಳಗಿನಂತೆ ನೋಡಬಹುದು.

ಆಂಧ್ರಪ್ರದೇಶದಲ್ಲಿ ಅಂದರೆ ಹೈದರಾಬಾದ್‌ನಲ್ಲಿ ೧೯೩೦ಕ್ಕೂ ಮುಂಚೆ ಕ್ರಾಂತಿಕಾರಿ ಚಟುವಟಿಕೆಗಳು ಬೆಳೆದು ಬಂದಿರುವುದನ್ನು ನೋಡಬಹುದು. ಕಮ್ಯುನಿಸ್ಟ್ ಹಿಡಿತದ ಆಂಧ್ರ ಮಹಾಸಭಾ ಸಂಘಟನೆಯ

ಚಟುವಟಿಕೆಗಳು ಹಾಗೂ ಅಂಬೇಡ್ಕರರ ತಾತ್ವಿಕ ಚಿಂತನೆಗಳ ಪ್ರಭಾವದಿಂದ ದಲಿತರಲ್ಲಿ ಉಂಟಾದ ಜಾಗೃತಿ ಮುಂತಾದ ಅಂಶಗಳು ಆಂಧ್ರಪ್ರದೇಶದಲ್ಲಿ ಹಿಂದುಳಿದವರ್ಗಗಳು, ದಲಿತ ಮತ್ತು ಮಾದಿಗರ ನ್ಯಾಯಪರವಾದ ಹೋರಾಟಗಳಿಗೆ ಹೊಸ ಆಯಾಮ ಒದಗಿಸಿರುವುದನ್ನು ಸಮರ್ಥಿಸುತ್ತೇವೆ. ಈ ಸಂಘಟನೆಯ ಪರ ಹೋರಾಟಕ್ಕೆ ಇಳಿದವರು ಹೈದರಾಬಾದಿ ಅಂಬೇಡ್ಕರ್ ಎಂದು ಹೆಸರಾದ ಬಿ.ಎಸ್. ವೆಂಕಟರಾವ್ ಮತ್ತು ಜೆ.ಸುಬ್ಬಯ್ಯ ಪ್ರಮುಖರು.

ಆಂಧ್ರದಲ್ಲಿ ನಡೆದ "ಮಾದಿಗ ರಿಸರ್ವೇಶನ್ ಪೋರಾಟ ಸಮಿತಿ"ಯ ಹೋರಾಟದಿಂದ ಇಲ್ಲಿ ಚಳವಳಿಯು ಉಗ್ರ ಸ್ವರೂಪ ಪಡೆದುಕೊಂಡಿದ್ದರಿಂದ ಇಲ್ಲಿ ಚಳವಳಿಗೆ ಮಾನ್ಯತೆ ಸಿಕ್ಕಿತು. ಆಂಧ್ರಪ್ರದೇಶದ ಮುಖ್ಯಮಂತ್ರಿ ಚಂದ್ರಬಾಬು ನಾಯ್ಡು ಸರ್ಕಾರ ಮಾದಿಗರ ಒತ್ತಾಸೆಗೆ ಮಣಿಯಿತು. ವರ್ಗೀಕರಣದ ಬಗ್ಗೆ ಅಧ್ಯಯನ ನಡೆಸಲೂ ಪಿ.ರಾಮಚಂದ್ರರಾಜು ಅವರ ಆಯೋಗವನ್ನು ರಚನೆ ಮಾಡಿತು. ೧೦.೯.೧೯೯೬ರಂದು ರಚನೆ ಆದ ಆಯೋಗವು ಸತತ ೮ ತಿಂಗಳು ಅವಿಶ್ರಾಂತವಾಗಿ ಶ್ರಮಿಸಿ ಮಾಹಿತಿ ಕಲೆಹಾಕಿತು. ಪದರು ಪದರು, ಅಧ್ಯಯನ ನಡೆಸಿ, ಕೊನೆಯಲ್ಲಿ ತನ್ನ ವರದಿಯನ್ನು ಸರಕಾರಕ್ಕೆ ಸಲ್ಲಿಸಿತು. ೨೮.೫.೧೯೯೭ರಂದು ಆಯೋಗದ ವರದಿ ಪಡೆದು ಸರ್ಕಾರ ಮರುಪರಿಶೀಲನೆ ಮತ್ತು ಅಧ್ಯಯನಕ್ಕೆ ಸಚಿವ ಸಂಪುಟ ಉಪಸಮಿತಿ ರಚಿಸಿತು. ಉಪಸಮಿತಿಯು ಈ ವರದಿಯನ್ನು ಪರಿಶೀಲಿಸಿದ ನಂತರ ಸರ್ಕಾರ ಇದಕ್ಕೆ ಒಪ್ಪಿಗೆ ನೀಡಿತು. ಇದರ ಪ್ರಕಾರ ವಿವರಗಳನ್ನು ಈ ಕೆಳಗಿನಂತೆ ಮಾಡಲಾಗಿದೆ.

ಎ : ವಿಭಾಗ : ೧ (ಇತರೆ)

ಬಿ : ವಿಭಾಗ : ೭ (ಮಾದಿಗರು)

ಸಿ : ವಿಭಾಗ : ೬ (ಮಾಲಾಗಳು)

ಡಿ : ವಿಭಾಗ : ೧ (ಆದಿ ಆಂಧ್ರ) (ಮಹೇಶ, ೨೦೦೨: ೮೮-೯೦).

ಈ ಆಯೋಗವು ಮಾದಿಗರಿಗೆ ಆಂಧ್ರಪ್ರದೇಶದಲ್ಲಿ ವಿಶೇಷ ಮೀಸಲಾತಿಯನ್ನು ಒದಗಿಸಿತು. ಈಗಾಗಲೇ ವಿವರಿಸಿದಂತೆ ೧೯೯೦ರಲ್ಲಿ ಆಂಧ್ರದಲ್ಲಿ ಆರಂಭಗೊಂಡ 'ಮಾದಿಗ ಮೀಸಲಾತಿ ಪೋರಾಟ' ಚಳವಳಿಯ ಪ್ರೇರಣೆಯಿಂದಾಗಿ ಕರ್ನಾಟಕದಲ್ಲಿಯೂ ಚಳವಳಿ ಆರಂಭಗೊಂಡಿತು. ಇದರ ಉದ್ದೇಶ ಸಾಮಾಜಿಕ ಸಮಾನತೆ, ಆರ್ಥಿಕ ಸಮಾನತೆ ಮತ್ತು ಶೈಕ್ಷಣಿಕ ಮೀಸಲಾತಿ ಬೇಡಿಕೆಗಾಗಿ ಚಳವಳಿ ನಡೆಸುವುದು. ಈ ಚಳವಳಿ ಎಷ್ಟು ತೀವ್ರ ಸ್ವರೂಪವಾಗಿತ್ತೆಂದರೆ ಕರ್ನಾಟಕ ರಾಜ್ಯದಲ್ಲಿ ಮಾದಿಗರಿಗೆ ಪ್ರತ್ಯೇಕ ಮೀಸಲಾತಿ ನೀಡದಿದ್ದರೆ ರಾಜಕೀಯ ಹೋರಾಟ ನಡೆಸುವ ಬಗೆಗೆ ಕರ್ನಾಟಕದ ಮಾದಿಗ ಜನಾಂಗದವರು ಘೋಷಿಸಿದರು. ಈ ಹಿನ್ನೆಲೆಯಲ್ಲಿ ೧೯೯೭ ನವೆಂಬರ್ ೭ರಂದು ಧಾರವಾಡದಲ್ಲಿ ಎನ್.ಕೆ.ಹೆಚ್. ಅವರ ಅಧ್ಯಕ್ಷತೆಯಲ್ಲಿ ನಡೆದ 'ಕರ್ನಾಟಕ ರಾಜ್ಯ ಮಾದಿಗರ ಹೋರಾಟ ಸಮಿತಿ'ಯ ಸಭೆ ಕರ್ನಾಟಕದಲ್ಲಿ ಆಂಧ್ರ ಮಾದರಿಯ ಹೋರಾಟದ ಹೊಳಹುವುಗಳನ್ನು ತೋರಿತು (ತೆಲಗಾವಿ,

೧೯೯೯: ೧೪೬). ಆಂಧ್ರ ಮತ್ತು ಕರ್ನಾಟಕದ ದಲಿತರು ಒಳ ಮೀಸಲಾತಿಯಿಂದ ನ್ಯಾಯವನ್ನು ಕೇಳುವುದಕ್ಕಿಂತ ಅಖಂಡವಾಗಿ ನಿಜವಾದ ಅಸ್ಪೃಶ್ಯರ ಲೆಕ್ಕದಲ್ಲಿ ಪ್ರತ್ಯೇಕ ಮೀಸಲಾತಿಯನ್ನು ಕೇಳಿದರೆ ಮರುಜೀವ ತುಂಬಿಕೊಳ್ಳಬಲ್ಲರು. ಇದರಿಂದಾಗಿ ಕರ್ನಾಟಕದಲ್ಲಿ ಮಾದಿಗರ ಹೋರಾಟವು ರಾಜಕೀಯ, ಸಾಮಾಜಿಕ, ಆರ್ಥಿಕ ಸಮಾನತೆ ಹಾಗೂ ಶೈಕ್ಷಣಿಕ ಮೀಸಲಾತಿಯನ್ನು ಪಡೆಯಲು ನಡೆಯುತ್ತಿದೆ.

ಈ ರೀತಿ ಕರ್ನಾಟಕದಲ್ಲಿ ಹುಟ್ಟಿಕೊಂಡ ನಂತರ ಸರಿಸುಮಾರು ರಾಯಚೂರು ಪ್ರದೇಶದಲ್ಲಿ ಕೂಡ ೧೯೯೭ ಜನೇ ಸೆಪ್ಟೆಂಬರ್ ಪ್ರಪ್ರಥಮ ಬಾರಿಗೆ ರಾಯಚೂರು ಜಿಲ್ಲೆಯಲ್ಲಿ 'ಮಾದಿಗ ಮಹಿಳಾ ಸಮಾವೇಶದಲ್ಲಿ' 'ಕರ್ನಾಟಕ ಮಾದಿಗ ರಿಸರ್ವೇಶನ್ ಹೋರಾಟ ಸಮಿತಿ ದಂಡೋರ' ಎಂದು ಹುಟ್ಟಿಕೊಂಡಿತು. ಹೀಗೆ ರೀತಿ ಹುಟ್ಟಿಕೊಂಡ ಈ ಚಳವಳಿ ಈಗಲೂ ಕೂಡ ತನ್ನ ಕಾರ್ಯಕ್ರಮಗಳನ್ನು ನಡೆಸುತ್ತಿದೆ (ಸಂದರ್ಶನ : ರಾಜು ಜೆ.ಬಿ., ೨೦.೦೨.೨೦೦೭). ಪರಿಶಿಷ್ಟರಲ್ಲಿ ಅತಿ ಹೆಚ್ಚು ಜನಸಂಖ್ಯೆ ಹೊಂದಿರುವ ಜಾತಿ ಮಾದಿಗರು. ಆದರೆ ಮಾದಿಗರಿಗೆ ಯಾವುದೇ ರೀತಿ ಸರಿಯಾದ ಸವಲತ್ತುಗಳು ಸಿಗುತ್ತಿಲ್ಲ. ಈ ಸವಲತ್ತುಗಳು ನಮ್ಮ ಬಲಗೈ ಪಂಗಡದವರು ಪಡೆಯುತ್ತಿದ್ದಾರೆ. ಅಲ್ಲದೇ ಎಡಗೈ ಪಂಗಡವಾದ ಮಾದಿಗರು ಜನಸಂಖ್ಯೆಯಲ್ಲಿ ಹೆಚ್ಚು ಇದ್ದರೂ ಕೂಡ ನಮಗೆ ಬೇಕಾದ ಸವಲತ್ತುಗಳನ್ನು ಪಡೆಯುವುದೇ ಇದರ ಮೂಲ ಉದ್ದೇಶವಾಗಿದೆ.

ಈ ಪರಿಶಿಷ್ಟರಲ್ಲಿ ೧೦೧ ಜಾತಿಗಳು ಇದ್ದರೂ ಮಾದಿಗ ಜನಾಂಗಕ್ಕೆ ಮೋಚಿ, ಚಮ್ಮಾರ, ಮಚೀಗೇರ, ಸಮಗಾರ ಇತರ ಜಾತಿಗಳು ಅಣ್ಣ ತಮ್ಮಂದಾಗಿರುವ ಜಾತಿಗಳಾಗಿವೆ. ಆದುದರಿಂದ ಈ ಮಾದಿಗ ಚಳವಳಿಗೆ ಈ ಎಲ್ಲ ಜಾತಿಯ ಬೆಂಬಲದೊಂದಿಗೆ ನಮ್ಮ ಮೀಸಲಾತಿ ಬೇಡಿಕೆ ಈಡೇರಿಸಿಕೊಳ್ಳುವುದು ನಮ್ಮ ಗುರಿ ಆಗಿದೆ(ಸಂದರ್ಶನ : ರಾಜು ಜೆ.ಬಿ.: ೨೦.೦೨.೦೦೭).

ಸದಾಶಿವ ಆಯೋಗವು ಸ್ವಾತಂತ್ರ್ಯಪೂರ್ವದಲ್ಲಿ ಮತ್ತು ನಂತರದ ರಾಜ್ಯದಲ್ಲಿ ಹಿಂದುಳಿದ ಹಾಗೂ ದಲಿತರ ಪೂರ್ವ ಅಭಿವೃದ್ಧಿಗೆ ಸಂಬಂಧಿಸಿದಂತೆ ಕಾಲಕಾಲಕ್ಕೆ ಸರ್ಕಾರಗಳು ಆಯೋಗಗಳನ್ನು ರಚನೆ ಮಾಡಿರುವುದನ್ನು ನೋಡುತ್ತೇವೆ. ಇದರ ಪರಿಣಾಮವಾಗಿ ಸರ್ಕಾರವು ೨೦೦೫-೦೬ನೇ ಸಾಲಿನಲ್ಲಿ ನಿವೃತ್ತ ನ್ಯಾಯಮೂರ್ತಿ "ಸದಾಶಿವ" ನೇತೃತ್ವದಲ್ಲಿ ಆಯೋಗವನ್ನು ನೇಮಿಸಿತು. ಇದರ ಉದ್ದೇಶ ವಿಶೇಷವಾಗಿ ಮಾದಿಗರರಿಗೆ ಒಳ ಮೀಸಲಾತಿ ಕಲ್ಪಿಸುವುದಾಗಿತ್ತು. ಈ ಸಮಿತಿ ೨೦೦೭ ಮಾರ್ಚ್ ತಿಂಗಳಲ್ಲಿ ರಾಯಚೂರು ಜಿಲ್ಲೆಗೆ ಭೇಟಿ ನೀಡಿತು. ಇಡೀ ರಾಯಚೂರು ಮಾದಿಗ ಮೀಸಲಾತಿ ದಂಡೋರ ಸಮಿತಿಯು ಅವರನ್ನು ಭೇಟಿ ಮಾಡಿ ಈ ಮಾದಿಗ ಜಾತಿಯ ಬಗ್ಗೆ ಅಧ್ಯಯನ ಮಾಡಿ ಮಾದಿಗರ ಮೀಸಲಾತಿ ಬಗ್ಗೆ ಚರ್ಚೆ ಮಾಡಿ ಮಾದಿಗ ಜಾತಿಗೆ ಒಳ ಮೀಸಲಾತಿ ನೀಡಬೇಕೆಂದು ಶಿಫಾರಸ್ಸು ಮಾಡುತ್ತೇನೆಂದು ಭರವಸೆ ನೀಡಿದ್ದಾರೆ (ಸಂದರ್ಶನ : ರಾಜು ಜೆ.ಬಿ., ೨೦.೦೨.೦೦೭). ಈ ಭರವಸೆ ಇದುವರೆಗೂ ಭರವಸೆಯಾಗಿಯೇ ಉಳಿದಿದ್ದು, ಇದರ ಬಗ್ಗೆ ಸರಕಾರದ ನಿರ್ಲಕ್ಷ್ಯ ಭಾವನೆ ತಳೆದಿರುವುದು ವಿಪರ್ಯಾಸದ ಸಂಗತಿಯೇ ಸರಿ.

ಮಾದಿಗರು ಇಂದು ಕರ್ನಾಟಕದಲ್ಲಿ ಸರಿಸುಮಾರು ೮೫ರಿಂದ ೯೫ ಲಕ್ಷ ಜನಸಂಖ್ಯೆ ಹೊಂದಿರುವುದರಿಂದ ನಮಗೆ ಮೀಸಲಾತಿ ಬೇಕು ಎಂದು ಇಡೀ ಕರ್ನಾಟಕದ ಮೂಲೆ ಮೂಲೆಯಲ್ಲಿ ಹೋರಾಟ ಮಾಡುತ್ತಿರುವುದನ್ನು ಕಾಣುತ್ತೇವೆ. ಅದರಂತೆ ರಾಯಚೂರು ಪ್ರದೇಶದಲ್ಲಿ ಇಡೀ ಸಂಘಟನೆಯು ತೀವ್ರವಾಗಿ ಹೋರಾಟ ಮಾಡುತ್ತಿದೆ. ಅಲ್ಲದೇ ಮಾದಿಗರನ್ನು ಚುನಾವಣೆಯಲ್ಲಿ 'ವೋಟ್ ಬ್ಯಾಂಕ್' ಎಂದು ಪರಿಗಣಿಸಿದಂತಿದೆ. ಆದುದರಿಂದ ಜನಸಂಖ್ಯೆ ಆಧಾರಿತ ಮೀಸಲಾತಿ ನೀಡಬೇಕು ಇಲ್ಲದಿದ್ದರೆ ಇಡೀ ಕರ್ನಾಟಕ ಮತ್ತು ರಾಯಚೂರು ಪ್ರದೇಶದ ತುಂಬಾ ಉಗ್ರ ಹೋರಾಟ ಮಾಡಬೇಕಾಗುತ್ತದೆ ಎಂದು ಆರ್.ಡಿ.ವಿಲ್ಸನ್ ಎಚ್ಚರಿಕೆ ನೀಡಿದ್ದಾನೆ (ಪ್ರಜಾವಾಣಿ, ೮.೦೨.೨೦೦೦).

ಜನಸಂಖ್ಯಾ ಆಧಾರಿತ ಮೀಸಲಾತಿಗಾಗಿ ರಾಯಚೂರು ಜಿಲ್ಲೆಯ ಪ್ರತಿಯೊಂದು ತಾಲೂಕುಗಳಲ್ಲಿ ಹೋರಾಟಗಳನ್ನು ಮಾಡುತ್ತಿದ್ದಾರೆ. ಅಲ್ಲದೇ ಇಂತಹ ಹೋರಾಟದಲ್ಲಿ ಯುವಕರ ಪಾತ್ರ ಮಹತ್ವದಾಗಿದೆ



ಮೀಸಲಾತಿಗೋಸ್ಕರ ಮಾದಿಗ ಸಮಾವೇಶದ ಸಾಂಕೇತಿಕ ಧರಣಿ

ಎಂದು ಹೇಳಬಹುದು. ಮಾದಿಗ ಜನಾಂಗದ ಕಾರ್ಮಿಕರು, ರೈತರು, ವಿದ್ಯಾರ್ಥಿಗಳು, ಮಹಿಳೆಯರು ಮತ್ತು ಪ್ರತಿಯೊಬ್ಬರು ಮಾದಿಗ ಜನಾಂಗ ಚಳವಳಿಯಲ್ಲಿ ಧುಮುಕುತ್ತಿದ್ದಾರೆ(ಸಂದರ್ಶನ: ರಾಜು ಜೆ.ಬಿ.: ೨೦.೦೨.೦೦೭). ಸರಕಾರವು ಈ ಮೀಸಲಾತಿಯ ಬಗೆಗೆ ಇದುವರೆಗೂ ಯಾವುದೇ ಕ್ರಮ ಕೈಗೊಳ್ಳುವಲ್ಲಿ ಸಫಲವಾಗಿಲ್ಲ. ಇದರಲ್ಲಿ ಸರ್ಕಾರದ ನಿರ್ಲಕ್ಷ್ಯತೆ ಎದ್ದು ಕಾಣುತ್ತದೆ.

## ಮಾದಿಗ ಮೀಸಲಾತಿ ಹೋರಾಟದ ಹಾಡುಗಳು

ಸ್ವಾತಂತ್ರ್ಯ ಬಂದು ೫೭ ವರ್ಷ ಗತಿಸಿದರೂ ಹಳ್ಳಿಗಳಲ್ಲಿ ಇರುವ ಅಸ್ಪೃಶ್ಯತೆ ತನ್ನ ವಿರಾಟ ರೂಪವನ್ನು ಪ್ರದರ್ಶಿಸುತ್ತಲೇ ಇದೆ. ಸಂವಿಧಾನದ ಆಶಯಗಳನ್ನು ಗಾಳಿಗೆ ತೂರಿರುವುದು ಒಂದು

ಕಡೆಯಾದರೆ ಕನಿಷ್ಠ ಸಂವಿಧಾನಬದ್ಧವಾಗಿ ಸಿಗಬೇಕಾದ ವಿದ್ಯೆ, ಉದ್ಯೋಗ, ಸಾಲ ಸವಲತ್ತುಗಳು ಅವರ ಸಂಖ್ಯೆಗೆ ತಕ್ಕಂತೆ ದಕ್ಕದೇ ಓಟಿನ ರಾಜಕಾರಣಕ್ಕೆ ಬಲಿಯಾಗಿದ್ದಾರೆ. ಸಮಾಜದ ಮುಖ್ಯವಾಹಿನಿಯಿಂದ ದೂರವಾದವರನ್ನು ಸರಿಪಡಿಸಬೇಕಾದ ಸರ್ಕಾರ ಒಡೆದು ಆಳುವ ನೀತಿಯನ್ನು ಅನುಸರಿಸುತ್ತಿದೆ. ಅದರಿಂದ ಇಡೀ ದೇಶ ಮತ್ತು ರಾಜ್ಯದ ಸಂಪತ್ತಿನ ಒಡೆಯರಾಗಿರುವ ಇಂದು ಪ್ರತ್ಯೇಕವಾಗಿ ಸಂಘಟಿತರಾಗಿ ಪರಿಶಿಷ್ಟ ಜಾತಿಯಲ್ಲಿ ನೂರಾರು ಜಾತಿಗಳಿಗೆ ಸರಿಸಮಾನವಾದ ನ್ಯಾಯವನ್ನು ಒದಗಿಸಲು



ದೇವದುರ್ಗದಲ್ಲಿ ನಡೆದ ಮಾದಿಗ ಸಮಾವೇಶದಲ್ಲಿ ಹಾಡುಗಳನ್ನು ಹಾಡುತ್ತಿರುವುದು

ಟೊಂಕಕಟ್ಟಿ ನಿಂತಿದ್ದಾರೆ. ಹೋರಾಟದ ಹಾಡುಗಳ ಮುಖಾಂತರ ಮೀಸಲಾತಿಯಲ್ಲಿ ಮೀಸಲಾತಿ ಎಂಬ ನಿಯಮದ ಪ್ರಕಾರ 'ಮಾದಿಗರ ಪ್ರತ್ಯೇಕ ಮೀಸಲಾತಿ ಸಲುವಾಗಿ' ಹೋರಾಟದ ಹಾಡುಗಳನ್ನು ರಾಯಚೂರು ಪ್ರದೇಶದ ತ್ಯಾಗಜೀವಿ ಹಾಡಿದ್ದಾರೆ. ಈ ಹಾಡುಗಳಲ್ಲಿ ಮಾದಿಗರ ಜೀವನದ ಮತ್ತು ಮೀಸಲಾತಿಯ ಪರವಾಗಿರುವ ಕ್ರಾಂತಿಕಾರಕ ಹಾಡುಗಳು ಇಂತಿವೆ.

೧. ಮಾದಿಗಣ್ಣ ಓ ಮಾದಿಗಣ್ಣ
ಓ ಕೇಳೋ ಮಾದಿಗಣ್ಣ
ಮಾತನಾಡದೆ ಮೌನಯಾಕೇ
ಎದ್ದೇಳು ಮಾದಿಗಣ್ಣ
ಎದ್ದೇಳು ಮಾದಿಗಣ್ಣ
ಎದ್ದೇಳು ಮಾದಿಗಣ್ಣ
ಶತ ಶತಮಾನಗಳಿಂದ
ಶೋಷಣೆಯಲ್ಲಿ ಬೆಂದವನೆ
ತಾತ ಮುತ್ತಾತರಿಂದ

ಜೀತವ ಮಾಡಿದವನೆ
ತ್ಯಾಗಜೀವಿ ಮಾದಿಗಣ್ಣ
ಭೋಗವಿಲ್ಲದ ಜೋಗಿಯಣ್ಣ
ಮಾತನಾಡದೇ ಮಾದಿಗಣ್ಣ
ಮೌನವೇ ಎಷ್ಟು ದಿನ ಬಾರೋ ನಮ್ಮಣ್ಣ
ಮಹಾಪುರುಷನೇ ಮಾದಿಗಣ್ಣ
ನೊಂದ ಬೆಂದ ಕಷ್ಟ ಜೀವಿ ನೀನೆಯಣ್ಣ
ಸಂಘ ಸಂಸ್ಥೆಗಳು ಸಾವಿರಾರಣ್ಣ
ತುತ್ತು ಬಿತ್ತಿ ದಿಕ್ಕು ಪಾಲಣ್ಣ
ತ್ಯಾಗಜೀವಿ ಮಾದಿಗಣ್ಣ
ಓ ಕೇಳೋ ಮಾದಿಗಣ್ಣ
ಮಾತನಾಡದೇ ಮೌನಯಾಕೇ
ಎದ್ದೇಳು ಮಾದಿಗಣ್ಣ
ಎದ್ದೇಳು ಮಾದಿಗಣ್ಣ
ಸಂಖ್ಯೆಯಲ್ಲಿ ಮಹಾಸಂಖ್ಯೆ ನೀನಣ್ಣ
ದಕ್ಕಲ್ಲಿಲ್ಲ ನಿನ್ನ ಹಕ್ಕು ಪಾಲಣ್ಣ
ಪ್ರಜಾರಾಜ್ಯದಲ್ಲಿ ಪ್ರವಾಹಣ್ಣ
ಪರಿಶಿಷ್ಟ ಪಟ್ಟಿಯಲ್ಲಿ ಪರದೇಶಿಯಣ್ಣ
ತ್ಯಾಗಜೀವಿ ಮಾದಿಗಣ್ಣ
ಓ ಕೇಳೋ ಮಾದಿಗಣ್ಣ
ಮೀಸಲಾತಿ ವರ್ಗೀಕರಣ ನೋಡಣ್ಣ
ಸಮಪಾಲು ಸಮಬಾಳು ನಿನ್ನ ಗುರಿಯಣ್ಣ
ಸ್ವಾಭಿಮಾನದ ಹಕ್ಕು ನಿನ್ನ ಹಕ್ಕಣ್ಣ
ಹಕ್ಕಿಗಾಗಿ ಹಲಗೆ ಹೊಡೆಯೋ ಬಾರಣ್ಣ
ಸಂವಿಧಾನದ ಹಕ್ಕು ನಿನ್ನ ಹಕ್ಕಣ್ಣ
ಹಕ್ಕಿಗಾಗಿ ತಮಟೆ ಹೊಡೆಯೋ ಬಾರಣ್ಣ
ಸಾಮಾಜಿಕ ನ್ಯಾಯವೆಂದು
ಸಾರಿ ಹೇಳೋ ಜನಗಳಿರಾ
ದಲಿತರು ಒಂದೇ ಎಂದು
ಬೊಗಳೇ ಬಿಡುವ ಅಣ್ಣಗಳಿರಾ

ಧರ್ಮ ಯುದ್ಧದ ಯಾತ್ರೆಗೆ
ದುಮುಕ ಬನ್ನಿ ದುಡಿಯ ಬನ್ನಿ
ಸಮಪಾಲಿನ ಹೋರಾಟಕ್ಕೆ
ಸಾಗಬನ್ನಿ ಸೇರಬನ್ನಿ
ಓ! ಸತ್ಯವಾದ ಈ ಸಮರಕ್ಕೆ
ಸ್ವಾಗತಿಸುವೆವು ಅಣ್ಣ
ದುಡಕಬೇಡಿ ಓ ಮಾದಿಗಣ್ಣ
ಧೈರ್ಯದಿಂದ ಸಾಗೋಣ ಬಾರೋ ನಮ್ಮಣ್ಣ
ದೇಶದಲ್ಲಿನ ಸಂಪತ್ತಿನಲ್ಲಿ
ನಿನ್ನ ದುಡಿಮೆ ನಿನಗೆ ದಕ್ಕಲೆಬೇಕು
ಈ ರಾಜ್ಯದಲ್ಲಿನ ಆಧಿಪತ್ಯದಲ್ಲಿ
ನಿನ್ನ ಪಾಲು ನಿನಗೆ ಸಿಗಲೆಬೇಕು
ಅಧಿಕಾರ ಪಡೆಯದೇ ಮಾದಿಗಣ್ಣ
ಉಳಿಗಾಲವಿಲ್ಲವೋ ಬಾರೋ ನಮ್ಮಣ್ಣ
ಉಳಿಗಾಲವಿಲ್ಲವೋ ಬಾರೋ ನಮ್ಮಣ್ಣ
ಉಳಿಗಾಲವಿಲ್ಲವೋ ಬಾರೋ ನಮ್ಮಣ್ಣ
ಮಾದಿಗಣ್ಣ ಓ ಮಾದಿಗಣ್ಣ
ಓ ಕೇಳೋ ಮಾದಿಗಣ್ಣ
ಮಾತನಾಡದೇ ಮೌನ ಯಾಕೇ
ಎದ್ದೇಳು ಮಾದಿಗಣ್ಣ
ಎದ್ದೇಳು ಮಾದಿಗಣ್ಣ
ಎದ್ದೇಳು ಮಾದಿಗಣ್ಣ

(ತ್ಯಾಗಜೀವಿ : ಮಾದಿಗರ ಹೋರಾಟ ಹಾಡುಗಳು, ಮಾದಿಗ ಮೀಸಲಾತಿ ಹೋರಾಟ ಸಮಿತಿ, ಕರ್ನಾಟಕ, ಅಶ್ವಿನಿ ಆಡಿಯೋ ಕ್ಯಾಸೆಟ್ ಸೆಂಟರ್, ಬೆಂಗಳೂರು, ೨೦೦೩)

೨. ಮಾದಿಗ ಜನವೇ ಕೇಳಿ
ಸಮೃದ್ಧಿ ಸಂಸ್ಕೃತಿ ನಮ್ಮದು
ಮಾದಿಗ ಜನವೇ ಕೇಳಿ
ಉಪಕಾರಿ ಬದುಕು ನಮ್ಮದು
ನಾಡೊಳಗೆ ಬದಕೇ ಇಲ್ಲವಲ್ಲೋ
ಓ ಮಾದಿಗಣ್ಣ ನಾಡೊಳಗೆ ಬದಕೋ ಇಲ್ಲವಲ್ಲೋ

ಜಾಂಬವಂತ ನಮ್ಮ ತಾತ
ಭೂಮಿ ಸೃಷ್ಟಿಸಿದಾನಂತ
ಗೇಣಿ ಭೂಮಿ ನಮಗೆ ಇಲ್ಲವಲ್ಲೋ ಓ ಮಾದಿಗಣ್ಣ
ತಬ್ಬಲಿ ಬದುಕು ಯಾರತರೋ ಇಲ್ಲ ಓ ಮಾದಿಗಣ್ಣ
ಮಾದಿಗ ಜನವೇ ಕೇಳಿ
ಸಮೃದ್ಧಿ ಸಂಸ್ಕೃತಿ ನಮ್ಮದು

೩. ಮಾದಿಗರೆಂದರೆ ಜಾಂಬವರೆಂದರೆ
ಬಹುಜನರೆಂದರೆ ಬಹುಸಂಖ್ಯೆ ನೀವು
ತಂದಾನಾನೋ ತಾನಿತಂದಾನನೋ
ತಂದಾನನೋ ತಾನಿತಂದಾನನೋ
ಬಲುಜೋಕೇ ನೀ ಕೇಳೋ ಓ ಮಾದಿಗಣ್ಣ
ಬಾಳುಬೆಳಗುವ ದಾರಿ ನೀ ತಿಳಿಯೋ ಬಾರಣ್ಣ
ಅಧಿಕಾರ ನೋಡಿದರೇ ಅಂಗೈ ಅಂಗಲಾವೋ
ತಂದನಾನೋ ತಾನಿತಂದಾನಾನೋ
ತಂದನಾನೋ ತಾನಿತಂದಾನಾನೋ
ಅಂಗಳದಷ್ಟು ಇದ್ದವರು ಯಾಕಾದರೋ
ತಂದನಾನೋ ತಾನಿತಂದಾನಾನೋ
ಇದರ ಗುಟ್ಟು ತಿಳಿಯಬೇಕು
ಅಧಿಕಾರ ಪಡೆಯಬೇಕು
ಜನಸಂಖ್ಯಾಧಾರಿತ ಪಾಲು ಸಿಗಬೇಕು
ಕಮ್ಯುನಿಷ್ಟ ದಲಿತ
ಬಹುಜನ ಸಿದ್ಧಾಂತವೋ
ತಂದನಾನೋ ತಾನೇ ತಂದಾನನೋ
ತಂದನಾನೋ ತಾನೇತಂದಾನನೋ
ಮಾದಿಗರೆಂದರೆ ಜಾಂಬವರೆಂದರೆ
ಬಹುಜನರೆಂದರೆ ಬಹುಸಂಖ್ಯೆ ನೀವು
ತಂದನಾನೋ ತಾನೇ ತಂದನಾನೋ
ತಂದನಾನೋ ತಾನೇ ತಂದಾನಾನೋ

(ತ್ಯಾಗಜೀವಿ : ಮಾದಿಗರ ಹೋರಾಟ ಹಾಡುಗಳು, ಮಾದಿಗ ಮೀಸಲಾತಿ ಹೋರಾಟ ಸಮಿತಿ, ಕರ್ನಾಟಕ, ಅಶ್ವಿನಿ ಆಡಿಯೋ ಕ್ಯಾಸೆಟ್ ಸೆಂಟರ್, ಬೆಂಗಳೂರು, ೨೦೦೩)

ಈ ಮೇಲಿನ ಹಾಡುಗಳು ಈ ರೀತಿ ಕ್ರಾಂತಿಕಾರಿ ಗೀತೆಗಳಾಗಿವೆ. ಇಲ್ಲಿ ಮುಖ್ಯವಾಗಿ ಮಾದಿಗರೆಂದರೆ ಯಾರು ಮತ್ತು ಮಾದಿಗರ ಜೀವನದ ಸಂಸ್ಕೃತಿ, ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳು ಹೇಗಿವೆ ಎಂಬುದು ತಿಳಿಯುತ್ತದೆ.

ಈ ಹೋರಾಟದ ಗೀತೆಗಳ ಮುಖಾಂತರ ಕರ್ನಾಟಕದಲ್ಲಿ ಅಲ್ಲದೇ ರಾಯಚೂರು ಪ್ರದೇಶದ ಪ್ರತಿಯೊಂದು ಹಳ್ಳಿಗಳಲ್ಲಿ ಹೋಗಿ ಅಲ್ಲಿ ಹೋರಾಟದ ಗೀತೆಗಳನ್ನು ಹಾಡಿ ನಾವು ಮಾದಿಗರು, ನಮ್ಮ ಸಂಖ್ಯೆ ಬಹಳಷ್ಟಿದೆ, ನಾವು ನಮ್ಮ ಮೀಸಲಾತಿ ಪಡೆಯಬೇಕು ಎಂಬ ಜಾಥ ಮಾಡಿಸಿದ್ದಾರೆ. ಜೆ.ಬಿ.ರಾಜು ಮತ್ತು ಡಿಂಗ್ರಿ ನರಸಪ್ಪನವರ ನೇತೃತ್ವದಲ್ಲಿ ಬೀದಿನಾಟಕ ಮಾಡಿ ಜನರಲ್ಲಿ ಮೀಸಲಾತಿ ಬಗ್ಗೆ ಜಾಗೃತಿ ಮೂಡಿಸಿ "ಮಾದಿಗ ಮೀಸಲಾತಿ ಹೋರಾಟ ಸಮಿತಿ" ರಾಯಚೂರು ಪ್ರದೇಶದಲ್ಲಿ ಬಗ್ಗೆ ಪ್ರಚಾರ ಪಡಿಸದಲ್ಲದೇ ಮಾದಿಗರ ಮೀಸಲಾತಿ ಹೋರಾಟಕ್ಕೆ ಬೆಂಬಲಿಸಿ ಜನರನ್ನು ಹುರಿದುಂಬಿಸಿದ್ದಾರೆ. ಇಲ್ಲಿ ನಡೆದ ಈ ಮೀಸಲಾತಿ ಹೋರಾಟದ ಪರಿಣಾಮ ಇಡೀ ಕರ್ನಾಟಕದಲ್ಲಿ ಈಗಲೂ ಭರಾಟೆಯಿಂದ ಸಾಗುತ್ತಿದೆ.

*** *** ***

ಅಸ್ಪೃಶ್ಯರಲ್ಲಿ ಅತಿ ಹಿಂದುಳಿದ ಮಾದಿಗರು ಇತ್ತೀಚೆಗಷ್ಟೆ ರಾಜಕೀಯ, ಸಾಮಾಜಿಕ, ಆರ್ಥಿಕ ರಂಗಗಳ ಬಗೆಗೆ ವಿವೇಚಿಸಲು ತೊಡಗಿದ್ದಾರೆ. ತಾವು ಯಾವ ಬುನಾದಿಯ ಆಧಾರದ ಮೇಲೆ ಪ್ರತ್ಯೇಕ ಮೀಸಲಾತಿಗೆ ಅಗ್ರಹಪಡಿಸುವವರಿದ್ದರೋ ಅದೇ ಬುನಾದಿಗೆ ಮೇಲ್ಜಾತಿ, ವ್ಯಾಪಾರಿ ಭೂ ಮಾಲೀಕರ ನಾಯಕತ್ವದಡಿಯಲ್ಲಿ ನೀತಿಗಳು ಇಂದಿಗೂ ಆರ್.ಎಸ್.ಎಸ್. ಬಿ.ಜೆ.ಪಿಗಳು ಸರ್ವೋಚ್ಚ ನ್ಯಾಯಾಲಯದ ಮೂಲಕ ಜಾತಿಯ ಮತಾಂಧತೆಯ ದಾಳಿ ಪ್ರಾರಂಭಿಸುವ ವ್ಯವಸ್ಥೆ ಮಾಡಿದ್ದಾರೆ.

ಮಾದಿಗರಿಂದಲೇ ಮೀಸಲಾತಿ ಚಳವಳಿ ಬದುಕಿ ಉಳಿಯಲು ಸಾಧ್ಯವೆಂಬ ಸತ್ಯವನ್ನು ಎಲ್ಲರ ದೃಷ್ಟಿಯಲ್ಲಿ ದಲಿತ ಹೋರಾಟಗಳ, ಮೀಸಲಾತಿ ಹೋರಾಟಗಳ ನಾಯಕರು ಅರಿಯುವಂತೆ ಮಾಡಲು ಸದವಕಾಶ ಬಂದಿದೆ (ಸಂದರ್ಶನ: ರಾಜು ಜೆ.ಬಿ., ೨೦.೦೨.೦೦೭).

ಇಂದು ದಲಿತ ದಲಿತರಲ್ಲೆ ಐಕ್ಯತೆ ಇಲ್ಲ. ಇಲ್ಲಿ ದಲಿತರ ವೈರತ್ವ ಹುಟ್ಟಿಕೊಂಡು ಮಾದಿಗರು ಪ್ರತ್ಯೇಕವಾದ ಮೀಸಲಾತಿ ಹೋರಾಟ ಪ್ರಾರಂಭಿಸಿದ್ದಾರೆ. ಇಲ್ಲಿ ಮಾದಿಗರಿಗೆ ಉದ್ಯೋಗದಲ್ಲಿ ಮೀಸಲಾತಿ ಮತ್ತು ಮಾದಿಗರನ್ನು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಪ್ರಬಲಗೊಳಿಸಬೇಕು ಎಂಬ ಯೋಜನೆಗಳು ಮಾದಿಗರ ಬೇಡಿಕೆಗಳಾಗಿವೆ.

ಮಾದಿಗ ಚಳವಳಿ ಸಾಮಾಜಿಕ ಸಿದ್ಧಾಂತದ ಮೇಲೆ ಪ್ರತ್ಯೇಕ ಮೀಸಲಾತಿಯನ್ನು ಬೇಡುತ್ತಿರುವರೋ ಅದೇ ಸಾಮಾಜಿಕ ಅಂಶಗಳ ಮೇಲೆ ತಮ್ಮ ಬೇಡಿಕೆಗಳಿಗೆ ಬೆಲೆ ಬೇಕೆಂದು ಮಾದಿಗರ ಹೋರಾಟದ ಕೂಗು(ಸಂದರ್ಶನ: ರಾಜು ಜೆ.ಬಿ.: ೨೦.೦೨.೦೦೭).

ಮಾದಿಗರು ತಮ್ಮ ಜೀವನದ ಉದ್ದಕ್ಕೂ ತಮಗೆ ಪ್ರತ್ಯೇಕ ಮೀಸಲಾತಿಯು ಸಿಗುವವರೆಗೂ ಯಾವುದೇ ರಾಜಕೀಯ ಪಕ್ಷಗಳು ಅಡ್ಡಿ ಬಂದರೂ ಮತ್ತು ಯಾವುದೇ ಜಾತಿ ಅಡ್ಡಿ ಬಂದರೂ ನಮಗೆ ಯಾವುದೇ ತೊಂದರೆಗಳು ಆಗುವುದಿಲ್ಲ. ಈ ಪ್ರತ್ಯೇಕ ಮೀಸಲಾತಿ ಪಡೆಯುವುದು 'ನಮ್ಮ ಜನ್ಮಸಿದ್ಧ ಹಕ್ಕು' ನಾವು ಪಡೆದೆ ಪಡೆಯುತ್ತೇವೆ (ಸಂದರ್ಶನ : ರಾಜು ಜೆ.ಬಿ., ೨೦.೦೨.೦೦೭).




**ಮಾದಿಗರ ಬೇಡಿಕೆಗಳಿಗಾಗಿ ನಡೆದ ಸಾಂಕೇತಿಕ ಧರಣಿ**

ಮಾದಿಗ ಚಳವಳಿಯು ಕೇವಲ ಇದು ಒಂದು ಜಾತಿ ಚಳವಳಿಯಲ್ಲ. ಇದೊಂದು ನ್ಯಾಯಪರವಾದ ಚಳವಳಿಯಾಗಿದೆ. ಅನ್ಯಾಯದ ವಿರುದ್ಧ ಹೋರಾಡುವ ಮತ್ತು ಶೋಷಣೆ ವಿರುದ್ಧ ಜೊತೆಗೆ ಪೂರಕವಾದ ನ್ಯಾಯಕ್ಕಾಗಿ ಹೋರಾಡುವ ಚಳವಳಿ ಇದಾಗಿದೆ (ಸಂದರ್ಶನ : ರಾಜು ಜೆ.ಬಿ., ೨೦.೦೨.೦೦೭).

ಈ ಚಳವಳಿಯು ಹುಟ್ಟಿಕೊಂಡಾಗಿನಿಂದ, ಇಂದಿನವರೆಗೆ ಈ ಹೋರಾಟವು ತೀವ್ರ ಪ್ರಗತಿಯಲ್ಲಿದೆ. ಇನ್ನು ಸ್ವಲ್ಪ ದಿನಗಳಲ್ಲಿ ಪ್ರತ್ಯೇಕ ಮೀಸಲಾತಿ ಪಡೆಯುತ್ತೇವೆ ಎಂಬ ಕೂಗು ಇದೆ. ಮಾದಿಗ ಜನಾಂಗದ ಆಸೆ ಆಕಾಂಕ್ಷೆಗಳು ಈ ಚಳವಳಿಯಲ್ಲಿವೆ.

ಈ ಚಳವಳಿಯು ಇತರರ ಚಳವಳಿಗೆ ಮಾದರಿಯಾದ ಚಳವಳಿಯಾಗಿದೆ. ಮಾದಿಗ ಚಳವಳಿಯು ಇತರೇ ರಾಜ್ಯಗಳಲ್ಲಿ ಇದ್ದರೂ ಕರ್ನಾಟಕ ರಾಜ್ಯದಲ್ಲಿ ಮತ್ತು ರಾಯಚೂರು ಪ್ರದೇಶದಲ್ಲಿ ಮಾದಿಗ ರಿಸರ್ವೇಶನ್ ಹೋರಾಟ ಸಮಿತಿ ದಂಡೋರ ತನ್ನದೇಯಾದ ಪ್ರಗತಿ ಹೋರಾಟಗಳು ನಾವು ಮೇಲಿನ ಅಂಶಗಳನ್ನು ಕಾಣುತ್ತೇವೆ.

ಒಟ್ಟಾರೆ ಹೇಳುವುದಾದರೆ ಸಂವಿಧಾನಾತ್ಮಕ ರಕ್ಷಣೆಯಿದ್ದರೂ ಸೌಲಭ್ಯಗಳು ಲಭ್ಯವಿದ್ದರೂ ಮಾದಿಗರ ಬದುಕು ಅಸಹನೀಯವಾಗಿವೆ. ಇದುವರೆಗೆ ಈ ಜನಾಂಗವು ಸಾಮಾಜಿಕ, ಆರ್ಥಿಕ,




ಜಿಲ್ಲೆಯಾದ್ಯಂತ ಮಾದಿಗ ಮೀಸಲಾತಿಗಾಗಿ ನಡೆದ ಪ್ರಚಾರ

ರಾಜಕೀಯ ಮತ್ತು ಶೈಕ್ಷಣಿಕ ಸಮಾನತೆಯಿಂದ ಜೀವಿಸಲು ಸಾಧ್ಯವಾಗಿಲ್ಲ. ಕಾರಣ ಪರಿಶಿಷ್ಟರಲ್ಲಿ ಬಲಗೈ ಪಂಗಡದವರು ಸರ್ಕಾರದ ಬಹುಪಾಲು ಸೌಲಭ್ಯವನ್ನು ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಆದ್ದರಿಂದ ಈ ಮಾದಿಗ ಜನಾಂಗವು ಒಳ ಮೀಸಲಾತಿ ಪಡೆದುಕೊಳ್ಳಲು ಸರ್ಕಾರಕ್ಕೆ ಹೋರಾಟದ ಮೂಲಕ ಎಚ್ಚರಿಕೆಯನ್ನು ನೀಡುತ್ತಿದ್ದಾರೆ.



## ರೈತ ಚಳವಳಿ

ರಾಯಚೂರು ಪ್ರದೇಶದಲ್ಲಿ ಸಾಮಾಜಿಕ ಚಳವಳಿಗಳಲ್ಲಿ ರೈತ ಚಳವಳಿ ಕೂಡ ಒಂದು. ರೈತರ ಸಮಸ್ಯೆಗಳು ಇಂದು ರಾಯಚೂರು ಪ್ರದೇಶದಲ್ಲಿ ರೈತ ಹೋರಾಟಗಳನ್ನು ಈ ಕೆಳಗಿನಂತೆ ಕಾಣಬಹುದು.

ಕರ್ನಾಟಕ ರೈತ ಚಳವಳಿಯಲ್ಲಿ ಮಹತ್ವದ ಪಾತ್ರ ವಹಿಸಿದ ನರಗುಂದ ನವಲಗುಂದ ರೈತ ಹೋರಾಟವು ಕರ್ನಾಟಕದ ರೈತರಲ್ಲಿ ಜಾಗೃತಿಯುಂಟು ಮಾಡಿತು. ಆಗಸ್ಟ್ ೧೧ ಮತ್ತು ೧೨, ೧೯೮೦ರಂದು ಹುಬ್ಬಳ್ಳಿಯಲ್ಲಿ ಸೇರಿದ ಮಲಪ್ರಭಾ ನೀರಾವರಿ ಪ್ರದೇಶದ ರೈತ ಸಮನ್ವಯ ಸಮಿತಿ ಪ್ರತಿನಿಧಿಗಳು ಹಾಗೂ ಬೆಳಗಾವಿ, ಬಿಜಾಪುರ, ಧಾರವಾಡ ಮತ್ತು ಬಳ್ಳಾರಿ, ರಾಯಚೂರು ಶಿವಮೊಗ್ಗ ಜಿಲ್ಲಾ ಪ್ರತಿನಿಧಿಗಳ ಸಂಯುಕ್ತ ಸಭೆ ನಡೆಸಿ ರಾಜ್ಯ ಮಟ್ಟದಲ್ಲಿ ರೈತರು ಸಂಘಟನೆಗೊಳ್ಳುವ ಅವಶ್ಯಕತೆಯನ್ನು ಮನಗಂಡರು. ಆ ಸಂದರ್ಭದಲ್ಲಿ ರಾಜ್ಯದ ರೈತರ ಬೇಡಿಕೆಗಳ ಈಡೇರಿಕೆಗಾಗಿ

ರಾಜ್ಯಾದ್ಯಂತ ರೈತ ಆಂದೋಲನ ಆರಂಭಿಸುವ ನಿರ್ಣಯ ಕೈಗೊಂಡಿತು (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯.೦೨.೨೦೦೭).

ಕರ್ನಾಟಕ ಪ್ರಾಂತ ರೈತ ಸಂಘದ ರಾಯಚೂರಿನ ಘಟಕದಲ್ಲಿ ಚಂದ್ರಶೇಖರ ಬಾಳೆ, ಮಲ್ಲಯ್ಯ ಜಾಲಹಳ್ಳಿ, ಆರ್. ಕೆ.ದೇಸಾಯಿ, ಆರ್.ಬಾಲಪ್ಪ, ಬಿ.ಲಿಂಗಪ್ಪ ಮುಂತಾದವರು ರಾಯಚೂರ ಪ್ರದೇಶದ ರೈತರ ನೋವುಗಳಿಗೆ ಹೋರಾಟದ ಮೂಲಕ ಸ್ಪಂದಿಸಿದ ಜನನಾಯಕರು. ಇವರ ನಾಯಕತ್ವದಲ್ಲಿ ಹೋರಾಟಗಳು ಕೆಲವು ಯಶಸ್ವಿಯಾಗಿವೆ. ಇನ್ನೂ ಕೆಲವು ಇಂದಿಗೂ ನಡೆಯುತ್ತಿರುವುದನ್ನು ನಾವು ಕಾಣುತ್ತೇವೆ. ರೈತರ ಹೋರಾಟಗಳು ಇಂತಿವೆ. ಅವುಗಳೆಂದರೆ ನಾರಾಯಣಪುರ ಬಲದಂಡೆ ಹೋರಾಟ, ಗಂಗಾವತಿ ಹೋರಾಟ, ಕುಷ್ಟಗಿ ಹೋರಾಟ, ಭಟ್ಟರಂಚಿನಾಳ ಭೂಹೋರಾಟ, ಮಾನ್ವಿ ಹೋರಾಟ, ಬರಗಾಲದ ಹೋರಾಟ ಮತ್ತು ನಕ್ಸಲೈಟ್ ಹಿನ್ನೆಲೆಯ ರೈತ ಕೂಲಿಕಾರ್ಮಿಕರ ಸಂಘದ ರಾಯಚೂರು ಹೋರಾಟಗಳು. ಈ ಕೆಳಗಿನಂತೆ ನೋಡಬಹುದು.

## ನಾರಾಯಣಪುರ ಬಲದಂಡೆ ಹೋರಾಟ

ಕೃಷಿಯು ಮುಂದುವರಿಯುತ್ತಿರುವ ಆರ್ಥಿಕತೆಗಳಲ್ಲಿ ಜನರ ಪ್ರಮುಖ ಜೀವನೋಪಾಯದ ಉದ್ಯೋಗವಾಗಿದೆ. ಹಿಂದಿನ ಆಧುನಿಕ ತಂತ್ರಜ್ಞಾನದ ಭರಾಟೆಯಲ್ಲಿ ಸಹ ಕೃಷಿಯು ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡು ಬಂದಿದೆ. ಕೇವಲ ಸಾಂಪ್ರದಾಯಕ ಕೃಷಿ ಪದ್ಧತಿಯನ್ನು ಹೊಂದಿದ ಭಾರತ ದೇಶವು ಬ್ರಿಟಿಷರ ಆಗಮನದ ನಂತರ ಕೃಷಿಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಂಡು ಅಣೆಕಟ್ಟುಗಳನ್ನು ನಿರ್ಮಿಸಿ, ಕಾಲವೆ, ಉಪಕಾಲುವೆಗಳ ಮೂಲಕ ಭೂಮಿಗೆ ನೀರುಣಿಸಲು ಪ್ರಯತ್ನ ಪಟ್ಟಿತು. ಕಾಲುವೆ ನಿರ್ಮಾಣ ಮಾಡುವ ಸಂದರ್ಭದಲ್ಲಿ ಭೂಮಿಯು ಸಮತಟ್ಟಾವಾಗಿಲ್ಲದ್ದರಿಂದ ಕೆಲವು ಪ್ರದೇಶಗಳು ನೀರಿನ ಸೌಲಭ್ಯದಿಂದ ವಂಚಿತವಾದವು. ಇದರಿಂದಾಗಿ ರಾಜ್ಯದಲ್ಲಿ ಹೋರಾಟಗಳು ಹುಟ್ಟಿಕೊಂಡವು. ಪರಿಣಾಮವಾಗಿ ನಾರಾಯಣಪುರ ಬಲದಂಡೆ ಹೋರಾಟವು ರಾಯಚೂರು ಪ್ರದೇಶದಲ್ಲಿ ಹುಟ್ಟಿಕೊಂಡಿತು. ರಾಯಚೂರು ಪ್ರದೇಶದಲ್ಲಿ ನಡೆದ ಪ್ರಮುಖ ರೈತ ಹೋರಾಟವಿದು. ಇದರ ನಾಯಕತ್ವವನ್ನು ಚಂದ್ರಶೇಖರ ಬಾಳೆ, ಮಲ್ಲಯ್ಯ ಜಾಲಹಳ್ಳಿ, ವೈ.ರಾಮಣ್ಣ, ಜಿ.ಬಸವರಾಜ ಇವರು ವಹಿಸಿದ್ದರು. ಇವರು ಮೊದಲು ಸಮಾವೇಶ ಪೂರ್ವಭಾವಿಯಾಗಿ ೧೯೮೬ಕ್ಕಿಂತ ಮೊದಲು ಮಲ್ಲಯ್ಯ ಜಾಲಹಳ್ಳಿ ಮತ್ತು ಕಂಬಾರ ಮಲ್ಲಯ್ಯ ಇಡೀ ರಾಯಚೂರು ಪ್ರದೇಶದಲ್ಲಿ ಜೀಪ್ ಜಾಥ ಮಾಡಿದ್ದರು.

ಜಿ.ಬಸವರಾಜ ಅವರ ನೇತೃತ್ವದಲ್ಲಿ ಸೈಕಲ್ ಜಾಥವನ್ನು ಮಾಡಲಾಗಿತ್ತು. ಆರ್. ಬಸವರಾಜ್, ಲಿಂಗಪ್ಪ ಪೂಜಾರಿ ಮುಂತಾದವರು ಸೇರಿ ಹಲವಾರು ಕಾರ್ಯಕ್ರಮಗಳನ್ನು ಮಾಡಿ ಜೊತೆಗೆ ಭಾಷಣಗಳ ಮುಖಾಂತರ ರೈತರಿಗೆ ಸಮಸ್ಯೆಗಳನ್ನು ಎದುರಿಸಲು ಮಾರ್ಗೋಪಾಯಗಳನ್ನು ತಿಳಿಸುತ್ತಿದ್ದರು (ಸಂದರ್ಶನ : ಚಂದ್ರಶೇಖರ ಬಾಳೆ, ೨೨.೦೨.೨೦೦೭).[೫]

ನಾರಾಯಣಪುರ ಬಲದಂಡೆ ಕಾಲುವೆ ಲಿಂಗಸ್ಗೂರು, ದೇವದುರ್ಗ ಮತ್ತು ರಾಯಚೂರು ಪ್ರದೇಶದ ಜನಕ್ಕೆ ನೀರಾವರಿ ಇಲ್ಲದೇ ಜನರು ಸಂಕಷ್ಟದಲ್ಲಿದ್ದರು. ಇಂತಹ ಸಂದರ್ಭದಲ್ಲಿ ಹಲವಾರು ಸಣ್ಣಪುಟ್ಟ ಹೋರಾಟಗಳು ಮಾಡಿದ ನಂತರ ಮುಂದೆ ದೊಡ್ಡ ಹೋರಾಟವನ್ನು ೩ ತಾಲೂಕಿನ ಜನ ಸೇರಿ ಇಲ್ಲಿ ಹಲವಾರು ಸಂಘಸಂಸ್ಥೆಗಳು ದೊಡ್ಡ ಸಮಾವೇಶವನ್ನು ಏಪ್ರಿಲ್ ೧೦, ೧೯೯೩ರಂದು ದೇವದುರ್ಗ ತಾಲೂಕಿನ ಪ್ರದೇಶದಲ್ಲಿ ಜನ ಸೇರಿಸಿ ಎಚ್.ಡಿ. ದೇವೇಗೌಡರನ್ನು ಆಹ್ವಾನಿಸಿ ಈ ಸಭೆಯ ಪ್ರಮುಖ ನಾಯಕರಾಗಿದ್ದರು ಇದರ ಪರಿಣಾಮವಾಗಿ ಎಚ್.ಡಿ.ದೇವೇಗೌಡರು ಮುಖ್ಯಮಂತ್ರಿಯಾಗಿದ್ದಾಗ ನಾರಾಯಣಪುರ ಬಲದಂಡೆ ಕಾಲುವೆ ಮಂಜೂರು ಮಾಡಿದ್ದು, ಅಲ್ಲದೇ ಇದರ ಪರಿಣಾಮವಾಗಿ ರಾಯಚೂರು, ಲಿಂಗಸ್ಗೂರು ಮತ್ತು ಹಿಂದುಳಿದ ತಾಲೂಕ ಹಣೆಪಟ್ಟಿಯಿಂದ, ಪ್ರಸ್ತುತದಲ್ಲಿ ಅಭಿವೃದ್ಧಿ ಹೊಂದುತ್ತಿರುವ ದೇವದುರ್ಗ ತಾಲೂಕಿಗೆ ನೀರು ಬಂದಿದ್ದು ಈ ಹೋರಾಟದ ಪರಿಣಾಮವಾಗಿ ಬಂದಿದೆ ಎಂದು ಹೇಳುತ್ತಾರೆ. ಸತತ ೧೯೮೬ ರಿಂದ ೧೯೯೩-೯೪ರವರೆಗೆ ನಡೆದ ಪ್ರಮುಖ ಹೋರಾಟ ಈ ಪ್ರದೇಶದಲ್ಲಿ ಕಾಣುತ್ತೇವೆ. ಕಾರಣ ಇಲ್ಲಿ ನಾರಾಯಣಪುರ ಬಲದಂಡೆ ಕಾಲುವೆಗೆ ಇಡೀ ರಾಯಚೂರು ಸಮುದಾಯದ ಪ್ರತಿಯೊಂದು ಸಂಘಟನೆಗಳು ಭಾಗವಹಿಸಿ, ಎಂಟುಹತ್ತು ವರ್ಷಗಳ ದೀರ್ಘಕಾಲ ನಡೆದ ಈ ಹೋರಾಟವು ಕೊನೆಯದಾಗಿ ಹೆಚ್.ಡಿ.ದೇವೇಗೌಡ ಮುಖ್ಯಮಂತ್ರಿಗಳಾಗಿದ್ದಾಗ ಇಲ್ಲಿ ಕಾಲುವೆ ವ್ಯವಸ್ಥೆ ಜಾರಿಗೆ ತರಲಾಯಿತು. ಇದರಿಂದ ಜನರು ಈ ನೀರನ್ನು ಬಳಸಿಕೊಂಡು ಉತ್ತಮ ಜೀವನ ನಡೆಸುತ್ತಿರುವುದಲ್ಲದೆ, ಹಿಂದುಳಿದ ಜಿಲ್ಲೆ ರಾಯಚೂರಿಗೆ ಸ್ವಲ್ಪಮಟ್ಟಿಗೆಯಾದರೂ ಅಭಿವೃದ್ಧಿ ಹೊಂದಲು ಈ ನಾರಾಯಣಪುರ ಬಲದಂಡೆ ಕಾಲುವೆ ಪ್ರಮುಖ ಕಾರಣವಾಗಿದೆ. ಇದರ ಪರಿಣಾಮವಾಗಿ ಈ ಪ್ರದೇಶದಲ್ಲಿ ಜನರು ಹೊಸ ಜೀವನ ಕ್ರಮವನ್ನು ಅಳವಡಿಸಿಕೊಳ್ಳಲು ಕಾರಣವಾಯಿತು ಎಂದು ಹೇಳಬಹುದು (ಸಂದರ್ಶನ : ಚಂದ್ರಶೇಖರ ಬಾಳೆ, ೧೯-೦೨-೨೦೦೭).

ಪ್ರಸ್ತುತ ರಾಯಚೂರು ಪ್ರದೇಶದಲ್ಲಿ ರೈತರ ಹೋರಾಟದ ಫಲವಾಗಿ ಸರ್ಕಾರ ಕೃಷ್ಣ ಬಲದಂಡೆ ಯೋಜನೆ ನಿರ್ಮಿಸುವ ಮೂಲಕ ಇಲ್ಲಿನ ಭೂ ಪ್ರದೇಶಕ್ಕೆ ಹೆಚ್ಚಿನ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿತು. ಈ ಯೋಜನೆಯನ್ನು ಕೃಷ್ಣಾ ಎಡದಂಡೆ ಕಾಲುವೆ ಜೊತೆಗೆ ಮೊದಲೇ ಪ್ರಾರಂಭಿಸಿದ್ದರೆ, ಈ ಜಿಲ್ಲೆ ಇನ್ನು ಬೇಗ ನೀರಾವರಿಗೆ ಒಳಗಾಗುತ್ತಿತ್ತು ಎಂದು ಹೇಳಬಹುದು. ಚಂದ್ರಶೇಖರ ಬಾಳೆ, ಮಲ್ಲಯ್ಯ ಜಾಲಹಳ್ಳಿ ಮತ್ತು ವೈ. ರಾಮಣ್ಣ ಮುಂತಾದವರು ಸತತವಾಗಿ ಎಂಟು-ಹತ್ತು ವರ್ಷಗಳ ಕಾಲ ಹೋರಾಟ ಮಾಡಿ ಸರ್ಕಾರದ ಮೇಲೆ ಒತ್ತಡ ತರುವುದರ ಮೂಲಕ ಇಂದು ಈ ನಾರಾಯಣಪುರ ಬಲದಂಡೆ ಕಾಲುವೆಯನ್ನು ಮಂಜೂರು ಮಾಡಿಸಿದ್ದು ಪ್ರಮುಖ ಸಾಧನೆಯಾಗಿದೆ. ಇದರ ಪರಿಣಾಮವಾಗಿ ರಾಯಚೂರು ಜಿಲ್ಲೆಯ ಬರಡು ಭೂಮಿ ಕೃಷಿಗೆ ಯೋಗ್ಯವಾಯಿತು. ಇಲ್ಲಿ ಹೆಚ್ಚಾಗಿ ಕೃಷಿಯನ್ನೇ ಅವಲಂಬಿಸಿದ್ದ ಜನರು ಉಸಿರಾಡುವಂತಾಯಿತು. ಇದರಿಂದ ಅತ್ಯಂತ ಹಿಂದುಳಿದ ದೇವದುರ್ಗ ತಾಲ್ಲೂಕು ತೀವ್ರಗತಿಯಲ್ಲಿ ಪ್ರಗತಿ ಹೊಂದಲು ಸಾಧ್ಯವಾಯಿತು.

## ರಾಯಚೂರಿನಲ್ಲಿ ನಡೆದ ನಾರಾಯಣಪುರ ಬಲದಂಡೆ ಹೋರಾಟ




ಆಕರ ಸ್ಫೂರ್ತಿ : ತುಕಾರಾಂ ಎಸ್. ಮತ್ತು ರಾಜು ಬಿ., ಸಾಕ್ಷರತಾ ದಾರಿಯ ಸಾವಿರ ಹೆಜ್ಜೆ (ಕರ್ನಾಟಕ ರಾಜ್ಯ ಸಾಕ್ಷರತಾ ಆಂದೋಲನದ ದಶಕದ ಸಾಧನೆಗಳು), ನಿರ್ದೇಶಕರು, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು, ೨೦೦೦, ಪು.೪೩

## ಗಂಗಾವತಿಯಲ್ಲಿ ನಡೆದ ಹೋರಾಟ

ರಾಯಚೂರು ಜಿಲ್ಲೆಯ ಗಂಗಾವತಿ ತಾಲ್ಲೂಕಿನಲ್ಲಿ ನಡೆದ ಈ ಹೋರಾಟವು ಕೂಲಿಕಾರ್ಮಿಕರ ಮೂಲ ಸಮಸ್ಯೆಯಾಗಿದೆ. ಈ ಕೂಲಿಕಾರ್ಮಿಕರಿಗೆ ಜೀವನ ಮಾಡಲು ತುಂಬ ಕಷ್ಟವಾಗಿದ್ದ ಕಾರಣ ಈ ಪ್ರದೇಶದಲ್ಲಿ ಜನರು ಹೋರಾಟಕ್ಕೆ ಇಳಿದಿರುವುದನ್ನು ಕಾಣುತ್ತೇವೆ. ಗಂಗಾವತಿಯ ವಿಶಿಷ್ಟ ಸಮಸ್ಯೆಯೆಂದರೆ ತುಂಗಾಭದ್ರ ಎಡದಂಡೆ ರಚನೆ ಮಾಡುವ ಸಂದರ್ಭದಲ್ಲಿ ಪುನರ್‌ವಸತಿ ಒಳಗಾದ ಜನರು ಬಂಜರು ಭೂಮಿಯನ್ನು ಕೂಲಿಕಾರ್ಮಿಕರಿಗೆ ಒದಗಿಸಬೇಕೆಂದು ಕೋರಿದರು. ಬೇರೆ ರಾಜ್ಯದಿಂದ ಬಂದವರು ಭೂ ಒಡೆಯರನ್ನು ಲೆಕ್ಕಿಸಿದೇ ಅವರ ಹೊಲದಲ್ಲಿ ನಿರ್ಭಯವಾಗಿ ಉಳುಮೆ ಮಾಡುತ್ತಿದ್ದರು. ಇದರ ವಿರುದ್ಧ ಗಂಗಾವತಿ, ಮಾನ್ವಿ ಮತ್ತು ಸಿಂಧನೂರಿನ ಜನ ಕೂಡ ಭೂಮಿ ಹಂಚಿಕೆಗಾಗಿ ಹೋರಾಟ ಮಾಡುತ್ತಿದ್ದರು (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯-೦೨-೨೦೦೭).

ಕೊಪ್ಪಳದ ಪ್ರದೇಶದಲ್ಲಿ ಕೂಡ ನವಲಗುಂದ - ನರಗುಂದ ರೈತ ಹೋರಾಟದಿಂದ ಜನರು ಎಚ್ಚೆತ್ತುಕೊಂಡು ಹೋರಾಟಕ್ಕಿಳಿದರು. ಈ ಭೂಮಿ ಹಂಚಿಕೆಗಾಗಿ ಈ ನಾಲ್ಕು ಪ್ರದೇಶದ ಜನ ದೊಡ್ಡ ಹೋರಾಟ ಮಾಡಿದರು.

ಈ ಹೋರಾಟದ ಪರಿಣಾಮವಾಗಿ ಏಕಕಾಲಕ್ಕೆ ಗುಂಡೂರಾವ್ ಮುಖ್ಯಮಂತ್ರಿಯಿದ್ದಾಗ ಈ ಪ್ರದೇಶಕ್ಕೆ ೮೦ ಕೋಟಿ ರೂಪಾಯಿ ಘೋಷಣೆ ಕೊಟ್ಟ ಮೇಲೆ ಜನರಿಗೆ ನೆಮ್ಮದಿ ಸಿಕ್ಕಿತು ಎಂದು ಹೇಳುತ್ತಾರೆ. ಜನರು ಇಲ್ಲಿ ಒಗ್ಗಟ್ಟಾಗಿ ಹೋರಾಟಕ್ಕೆ ಇಳಿದರು. ಈ ಹೋರಾಟವು ಸಮಾಜದಲ್ಲಿ ತೀವ್ರತರದ ಬದಲಾವಣೆಯನ್ನು ತಂದಿತು. ಜನರು ತಮ್ಮ ಭವಿಷ್ಯದ ಜೀವನಕ್ಕಾಗಿ ಭೂಮಿ ನೀಡಬೇಕೆಂದು ಸರ್ಕಾರಕ್ಕೆ ಮನವಿ ಸಲ್ಲಿಸಿದರು. ಈ ಹೋರಾಟದ ಫಲವಾಗಿ ಸರ್ಕಾರ ಇವರ ನೋವಿಗೆ ಸ್ಪಂದಿಸಿರುವುದನ್ನು ನಾವು ಈ ಮೇಲಿನ ಅಂಶಗಳಿಂದ ನೋಡಬಹುದು.

## ಕುಷ್ಟಗಿಯಲ್ಲಿ ನಡೆದ ಹೋರಾಟ

ರಾಯಚೂರು ಜಿಲ್ಲೆಯ ವ್ಯಾಪ್ತಿಗೆ ಬರುವ ಕುಷ್ಟಗಿ ಒಂದು ತಾಲ್ಲೂಕು ಕೇಂದ್ರವಾಗಿದೆ. ಇಲ್ಲಿ ನೀರು, ವಿದ್ಯುತ್, ಆಹಾರ ಮತ್ತು ವಸತಿಗಳಂತಹ ಹಲವಾರು ಸಮಸ್ಯೆಗಳು ಕಂಡುಬರುತ್ತವೆ. ಹೀಗಾಗಿ ಇಲ್ಲಿನ ಜನರ ಜೀವನ ಅಸ್ತವ್ಯಸ್ತವಾಗಿದೆ. ಅದರಲ್ಲೂ ಬರಗಾಲದಂತಹ ತೀವ್ರತರದ ಸಮಸ್ಯೆಯು ಇಲ್ಲಿನ ಜನರಿಗೆ ರೋಗಗ್ರಸ್ಥ ಶಾಪವಾಗಿ ಪರಿಣಮಿಸಿದೆ. ಸರ್ಕಾರದ ಯಾವುದೇ ಪರಿಹಾರವು ಇದುವರೆಗೆ ಜನರನ್ನು ತಲುಪಿಲ್ಲ. ಸಮರ್ಪಕವಾದ ಮೂಲಭೂತ ಸೌಕರ್ಯಗಳ ಯೋಜನೆಯು ಇದುವರೆಗೆ ರೂಪಿಸಿಲ್ಲದಿರುವುದು ಇಲ್ಲಿನ ಜನರನ್ನು ಮತ್ತಷ್ಟು ಕಂಗೆಡಿಸಿದೆ. ಹೀಗಾಗಿ ಈ ಪ್ರದೇಶದ ಜನರು ತಮ್ಮ ನ್ಯಾಯಯುತ ಬೇಡಿಕೆಗಾಗಿ ಹೋರಾಟ ಮಾಡುತ್ತಿದ್ದಾರೆ.

# ಗಂಗಾವತಿಯಲ್ಲಿ ನಡೆದ ಹೋರಾಟ




ಆಕರ ಸ್ಫೂರ್ತಿ : ತುಕಾರಾಂ ಎಸ್. ಮತ್ತು ರಾಜು ಬಿ., ಸಾಕ್ಷರತಾ ದಾರಿಯ ಸಾವಿರ ಹೆಜ್ಜೆ (ಕರ್ನಾಟಕ ರಾಜ್ಯ ಸಾಕ್ಷರತಾ ಆಂದೋಲನದ ದಶಕದ ಸಾಧನೆಗಳು), ನಿರ್ದೇಶಕರು, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು, ೨೦೦೦, ಪು.೪೩

# ಕುಷ್ಟಗಿಯಲ್ಲಿ ನಡೆದ ಹೋರಾಟ




ಆಕರ ಸ್ಫೂರ್ತಿ : ತುಕಾರಾಂ ಎಸ್. ಮತ್ತು ರಾಜು ಬಿ., ಸಾಕ್ಷರತಾ ದಾರಿಯ ಸಾವಿರ ಹೆಜ್ಜೆ (ಕರ್ನಾಟಕ ರಾಜ್ಯ ಸಾಕ್ಷರತಾ ಆಂದೋಲನದ ದಶಕದ ಸಾಧನೆಗಳು), ನಿರ್ದೇಶಕರು, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು, ೨೦೦೦, ಪು.೪೩

ಕುಷ್ಟಗಿಯಲ್ಲಿ ಬರಗಾಲದ ಹೋರಾಟಗಳು ನಡೆಯುತ್ತವೆ. ವಿಶೇಷವಾಗಿ ೧೯೮೫-೮೬ರಲ್ಲಿ ರೈತ ಮತ್ತು ಕಾರ್ಮಿಕ ಮುಖಂಡರಾದ ಸೂರ್ಯನಾರಾಯಣರವರು ಇಲ್ಲಿಗೆ ಬಂದು ಜನರಿಗೆ ಕಾಳು-ಕಡ್ಡಿ ಹಂಚಿದ್ದಾರೆ. ಇಲ್ಲಿ ಬಹಳಷ್ಟು ಬರಗಾಲವಿತ್ತು. ಇಂತಹ ಸಮಸ್ಯೆಗೆ ಯಾವುದೇ ರೀತಿಯ ಸ್ಪಂದನೆ ಇಂದಿಗೂ ಕುಷ್ಟಗಿ ಪ್ರದೇಶದಲ್ಲಿ ಇಲ್ಲ. ಇದರ ಪರಿಣಾಮವಾಗಿ ಇಂದಿಗೂ ಈ ಪ್ರದೇಶದಲ್ಲಿ ಸರ್ಕಾರವಾಗಲಿ ಯಾರೊಬ್ಬರೂ ಕೂಡ ಈ ಪ್ರದೇಶದ ಬಗ್ಗೆ ಚಿಂತನೆ ಮಾಡಿಲ್ಲ ಎಂದು ಹೇಳಬಹುದು.

ಈ ಪ್ರದೇಶದಲ್ಲಿ ರೈತರು ಬೋರ್ ಮತ್ತು ಬಾವಿ ನೀರಿನ ವ್ಯವಸ್ಥೆ ಮಾಡಿಕೊಂಡು ತೋಟಗಾರಿಕೆ ಆರಂಭಿಸಿದರು. ಆಗ ವಿದ್ಯುತ್ ತೊಂದರೆಯಾಯಿತು. ವಿದ್ಯುತ್ ತೊಂದರೆಗಾಗಿ ದೊಡ್ಡ ದೊಡ್ಡ ಹೋರಾಟಗಳು ನಡೆದವು. ಪರಿಣಾಮವಾಗಿ ಒಂದು ಮಟ್ಟದಲ್ಲಿ ವಿದ್ಯುತ್ ಸಮಸ್ಯೆಯನ್ನು ಬಗೆಹರಿಸಲಾಗಿದೆ. ಆದರೆ ವಿದ್ಯುತ್ ದರದ ನಿರಂತರ ಏರಿಕೆಯಿಂದಾಗಿ ಸಂಪೂರ್ಣವಾಗಿ ಪರಿಹಾರ ಸಿಕ್ಕಿಲ್ಲ ಎಂದು ಇಂದಿಗೂ ಪ್ರದೇಶದಲ್ಲಿ ಕಾಣುತ್ತೇವೆ. ಈ ಬರಗಾಲದ ಹೋರಾಟ ಜನರನ್ನು ಇಂದಿಗೂ ಕೂಡ ನಿದ್ದೆಗೆಡಿಸಿದೆ. ರೈತ ಹೋರಾಟವು ಬರಗಾಲಕ್ಕೆ ಪರಿಹಾರ ಒದಗಿಸಬೇಕೆಂದು ಸರಕಾರಕ್ಕೆ ಮನವಿ ಮಾಡಿದರೂ ಯಾವ ಪ್ರಯೋಜನವಾಗಿಲ್ಲ. ಬೋರ್ ಮತ್ತು ಬಾವಿಗಳಿಂದ ನೀರಿನ ವ್ಯವಸ್ಥೆ ಮಾಡಿದರೂ ಇಂದು ಅವುಗಳು ದುರಸ್ತಿ ಪಡೆದಿವೆ. ತಾತ್ಕಾಲಿಕ ವಿದ್ಯುತ್ ಪರಿಹಾರದಿಂದ ಯಾವ ಲಾಭವು ಕೂಡ ರೈತರಿಗೆ ಸಿಕ್ಕಿಲ್ಲ. ಪ್ರಸ್ತುತ ಸರಕಾರ ವಿದ್ಯುತ್, ನೀರು, ಬರಗಾಲ ಇವರ ನೋವುಗಳಿಗೆ ಸ್ಪಂದಿಸಬೇಕು ಎಂಬುದೇ ಇವರ ಆಶಯ. ಅಲ್ಲದೇ ಇವರ ಜೀವನಕ್ಕೆ ದಾರಿ ಮಾಡಿಕೊಡಬೇಕೆಂಬುದೇ ಈ ರೈತ ಸಂಘಟನೆ ಮಾಡುವ ಕಾರ್ಯವಾಗಿದೆ (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯.೦೨.೨೦೦೭). ಕುಷ್ಟಗಿಯಲ್ಲಿ ಸರ್ಕಾರ ರೂಪಿಸಿದ ರಾಜ್ಯ ಸರ್ಕಾರದ ಯೋಜನೆಗಳನ್ನು ಜಾರಿಗೆ ತಂದರು ಕೂಡ ಈ ಯೋಜನೆಯ ಫಲ ಅದು ಜನರಿಗೆ ತಲುಪುವಲ್ಲಿ ವಿಫಲವಾಗಿವೆ. ಬರಗಾಲದ ಪ್ಯಾಕೆಜ್‌ಗಳು ಕೂಡ ತಲುಪಿಲ್ಲದಿರುವುದು ವಿಪರ್ಯಾಸದ ಸಂಗತಿಯೇ ಸರಿ. ಹೀಗಾಗಿ ಈ ಭಾಗದ ಜನರು ಮೂಲಭೂತ ಸೌಕರ್ಯಗಳ ಬೇಡಿಕೆಗಾಗಿ ಸರ್ಕಾರದ ವಿರುದ್ಧ ಹೋರಾಟ ಮಾಡುತ್ತಿರುವುದನ್ನು ಕಾಣುತ್ತವೆ.

## ಭಟ್ಟರಂಚಿನಾಳ ಭೂಹೋರಾಟ

ರಾಯಚೂರು ಜಿಲ್ಲೆಯ ಗಂಗಾವತಿ ತಾಲ್ಲೂಕಿನಲ್ಲಿ ಬರುವ ಒಂದು ಕ್ಯಾಂಪ್ ಈ ಭಟ್ಟರಂಚಿನಾಳ. ಈ ಪ್ರದೇಶದಲ್ಲಿ ರೆಡ್ಡಿ ಜನಾಂಗದವರು ಅತಿ ಹೆಚ್ಚು ವಾಸವಾಗಿದ್ದಾರೆ. ಜೊತೆಗೆ ಹೆಚ್ಚು ಭೂಮಿಯನ್ನು ಹೊಂದಿದ್ದಾರೆ. ಹೀಗಾಗಿ ಇವರನ್ನು ಭೂ ಮಾಲೀಕರೆಂದು ಕರೆದರೆ ತಪ್ಪಾಗಲಾರದು. ಬಡ ಗೇಣಿದಾರರು ಅವರ ಮನೆಯಲ್ಲಿ ದುಡಿದರೂ ದುಡಿಮೆಗೆ ತಕ್ಕಂತೆ ಕೂಲಿಯನ್ನು ಕೊಡುವುದಿಲ್ಲ. ಇದರಿಂದ ನೊಂದ ಕಾರ್ಮಿಕರು ಮತ್ತು ಬಡ ಗೇಣಿದಾರರು ಹಾಗೂ ರೈತ ಸಂಘಗಳು ರೆಡ್ಡಿ ಜನಾಂಗದ ವಿರುದ್ಧ ಹೋರಾಟ ಮಾಡಿರುವುದನ್ನು ಇಲ್ಲಿ ನಾವು ನೋಡಬಹುದು.

## ಭಟ್ಟರಂಚಿನಾಳ ಭೂ ಹೋರಾಟ




ಆಕರ ಸ್ಫೂರ್ತಿ : ತುಕಾರಾಂ ಎಸ್. ಮತ್ತು ರಾಜು ಬಿ., ಸಾಕ್ಷರತಾ ದಾರಿಯ ಸಾವಿರ ಹೆಜ್ಜೆ (ಕರ್ನಾಟಕ ರಾಜ್ಯ ಸಾಕ್ಷರತಾ ಆಂದೋಲನದ ದಶಕದ ಸಾಧನೆಗಳು), ನಿರ್ದೇಶಕರು, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು, ೨೦೦೦, ಪು.೪೩

ಗಂಗಾವತಿಯಲ್ಲಿ ಬರುವ ಈ ಭಟ್ಟರಂಚಿನಾಳ ಪ್ರದೇಶದಲ್ಲಿ ರೆಡ್ಡಿಗಳು ಹೆಚ್ಚು ಹೊಂದಿದ್ದರಿಂದ ಇವರ ವಿರುದ್ಧ ಕರ್ನಾಟಕ ಪ್ರಾಂತ ರೈತ ಸಂಘ ಮತ್ತು ಕರ್ನಾಟಕ ಕೃಷಿ ಕಾರ್ಮಿಕರ ಸಂಘ ಸೇರಿ ಹೋರಾಟ ಮಾಡಿತು. ಈ ಹೋರಾಟದ ನಾಯಕತ್ವವನ್ನು ಬಾಲಪ್ಪ, ತಿಮ್ಮರೆಡ್ಡಿ, ಹುಸೇನಸಾಬ್ ಇವರು ವಹಿಸಿದ್ದರು.

ಈ ಹೋರಾಟದಲ್ಲಿ ಬಾಲಪ್ಪ ಮತ್ತು ತಿಮ್ಮರೆಡ್ಡಿಗೆ ಬಲವಾದ ಪೆಟ್ಟು ಬಿತ್ತು. ಅವರನ್ನು ಬಳ್ಳಾರಿ ಆಸ್ಪತ್ರೆಗೆ ಸೇರಿಸಲಾಯಿತು. ಅಲ್ಲದೇ ಸ್ಥಳೀಯ ಗೂಂಡಾಗಳು ಜನರ ಮೇಲೆ ಅತ್ಯಾಚಾರ ಮಾಡುತ್ತಿದ್ದರು. ಇವರಿಗೆ ಪೋಲೀಸ್ ಸಹಾಯ ಕೂಡ ಇತ್ತು. ಇದರ ಪರಿಣಾಮವಾಗಿ ಸುಮಾರು ಜನ ರೈತರು ಮತ್ತು ಅವರ ಹೆಂಡತಿಯರು ತಾಳಿ-ಬಳೆ ತೆಗೆದುಕೊಂಡು ಜಿಲ್ಲಾಧಿಕಾರಿ ಕಛೇರಿಗೆ ಬಂದು ಮನವಿ ಕೊಟ್ಟರು. ೧೯೯೩-೯೪ರಲ್ಲಿ ನಡೆದ ಈ 'ನಮ್ಮ ಗಂಡನನ್ನು ಉಳಿಸಿ ಮತ್ತು ನಮಗೆ ಭೂಮಿ ಬೇಕು' ಎಂಬ ಅವರ ಹೋರಾಟದ ಫಲವಾಗಿ ಮುಂದೆ ಭೈರಪ್ಪ ಎಂಬ ಪೋಲೀಸ್ ಅಧಿಕಾರಿಯನ್ನು ವರ್ಗಾವಣೆ ಮಾಡಲಾಯಿತು. ಭೂ ಮಾಲೀಕ ರೆಡ್ಡಿಯನ್ನು ಬಂಧಿಸಲಾಯಿತು. ತಹಸೀಲ್ದಾರರು ಆ ಪ್ರದೇಶ ಪರಿಶೀಲನೆ ಮಾಡಿ ಭೂಮಿ ಇರಲಾರದವರಿಗೆ ಭೂಮಿ ನೀಡಿದರು (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯-೦೨-೨೦೦೭). ರೆಡ್ಡಿಯ ವಿರುದ್ಧ ರೈತ ಸಂಘಟನೆಗಳು ಹೋರಾಟ ಮಾಡಿದ್ದರಿಂದ ಇಲ್ಲಿನ ಬಡವರಿಗೆ ಭೂಮಿಯನ್ನು ದೊರಕಿಸಿಕೊಡುವುದರಲ್ಲಿ ಯಶಸ್ವಿಯಾದವು. ಸರಕಾರ ಮಧ್ಯಸ್ಥಿಕೆ ವಹಿಸಿ ಬಡವರಿಗೆ ಭೂಮಿ ಮತ್ತು ನ್ಯಾಯ ಕೊಡಿಸುವಲ್ಲಿ ಮಹತ್ವದ ಪಾತ್ರ ವಹಿಸಿದೆ.

## ಮಾನ್ವಿಯಲ್ಲಿ ನಡೆದ ಭೂಹೋರಾಟ

ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ ಹರನಳ್ಳಿ ಎಂಬ ಗ್ರಾಮದಲ್ಲಿ ರಾಘವೇಂದ್ರಸ್ವಾಮಿ ಮಠದ ದೇವಸ್ಥಾನವು ಹೆಚ್ಚುವರಿ ಭೂಮಿಯನ್ನು ಬಳಸುತ್ತಿತ್ತು. ಈ ಭೂಮಿಯನ್ನು ಬಡವರಿಗೆ ನೀಡಬೇಕೆಂದು ರೈತ ಸಂಘಟನೆಗಳು ಹೋರಾಟ ಮಾಡಿದು.

ಈ ಹೋರಾಟದ ನಾಯಕತ್ವವನ್ನು ಹರವಿ ರಾಘವೇಂದ್ರ, ಹರವಿ ವೀರಣ್ಣಗೌಡ, ಡಾ.ಬಾಲಗೌಡ ಇವರು ವಹಿಸಿದ್ದರು. ಹರವಿ ರಾಘವೇಂದ್ರ ಸ್ವಾಮಿಯ ಮಠದ ಭೂಮಿಯನ್ನು ಅಲ್ಲಿಯ ಸ್ಥಳೀಯರು ಪಾಲುದಾರರಾಗಿ ಪಡೆದು ಕೆಲಸ ಮಾಡುತ್ತಿದ್ದರು.

೧೯೮೬-೮೭ರಲ್ಲಿ ರಾಘವೇಂದ್ರ ಸ್ವಾಮಿಯ ಮಠದ ಭೂಮಿಯನ್ನು ಹೆಚ್ಚುವರಿ ಭೂಮಿಯೆಂದು ಸರಕಾರ ಘೋಷಣೆ ಮಾಡಿದ್ದರೂ ನೀಡಿರಲ್ಲಿಲ್ಲ. ಘೋಷಣೆಯಾದ ಭೂಮಿಯನ್ನು ನೀಡಬೇಕೆಂದು ಕರ್ನಾಟಕ ಪ್ರಾಂತ ರೈತ ಸಂಘದವರು ಜನರಲ್ಲಿ ವಿಶೇಷ ಕಾಳಜಿ ತಂದರು. ೨೦-೩೦ ವರ್ಷ ಸಾಗುವಳಿ ಮಾಡಿದ ಭೂಮಿಯನ್ನು ನೀಡಬೇಕೆಂದು ಹೋರಾಟ ಮಾಡಿದ ರೈತರನ್ನು ಮಾನ್ವಿ, ರಾಯಚೂರು ಮತ್ತು ಬಳ್ಳಾರಿ ಜೈಲಿನಲ್ಲಿ ಇಡಲಾಯಿತು. ಆದರೆ ಇಂದೂ ಕೂಡ ಪಾಲುದಾರರೇ ಭೂಮಿಯನ್ನು ಸಾಗುವಳಿ

# ಮಾನ್ವಿಯಲ್ಲಿ ನಡೆದ ಭೂ ಹೋರಾಟ




ಆಕರ ಸ್ಫೂರ್ತಿ : ತುಕಾರಾಂ ಎಸ್. ಮತ್ತು ರಾಜು ಬಿ., ಸಾಕ್ಷರತಾ ದಾರಿಯ ಸಾವಿರ ಹೆಜ್ಜೆ (ಕರ್ನಾಟಕ ರಾಜ್ಯ ಸಾಕ್ಷರತಾ ಆಂದೋಲನದ ದಶಕದ ಸಾಧನೆಗಳು), ನಿರ್ದೇಶಕರು, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು, ೨೦೦೦, ಪು.೪೩

ಮಾಡುತ್ತಿದ್ದಾರೆ. ಹರನಹಳ್ಳಿ ಗ್ರಾಮದ ಜನತೆ ತಮಗೆ ಹೆಚ್ಚುವರಿ ಭೂಮಿಯನ್ನು ನೀಡಬೇಕು. ಈ ಮಠದ ಪಾಲುದಾರರಿಂದ ಭೂಮಿಯನ್ನು ವಶಪಡಿಸಿಕೊಂಡು ಇಲ್ಲಿನ ಬಡವರಿಗೆ ನೀಡಬೇಕೆಂದು ರೈತ ಸಂಘಟನೆಯ ಕೂಗಾಗಿದೆ. ಇದರ ಪರಿಣಾಮವಾಗಿ ಯಾವುದೇ ಕಾರ್ಯಗಳು ಸಫಲಗೊಂಡಿಲ್ಲ. (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯-೦೨-೨೦೦೭). ಈಗಲೂ ಈ ರಾಘವೇಂದ್ರಸ್ವಾಮಿಯ ಮಠದ ಹೆಚ್ಚುವರಿ ಭೂಮಿಯನ್ನು ಸರಕಾರ ನೀಡಬೇಕೆಂದು ಆಜ್ಞೆ ಹೇರಡಿಸಿದರೂ ಗೇಣಿದಾರರಿಗೆ ನೀಡಿಲ್ಲ. ಜೊತೆಗೆ ಸರ್ಕಾರ ಯಾವುದೇ ಕ್ರಮವನ್ನು ಮಠದ ಸ್ವಾಮಿಯವರ ವಿರುದ್ಧ ಕೈಗೊಂಡಿಲ್ಲ. ಜೊತೆಗೆ ಇಲ್ಲಿನ ಜನರಿಗಾಗಿ ಸರಕಾರ ಯಾವ ಪರ್ಯಾಯ ವ್ಯವಸ್ಥೆಯನ್ನು ಕಲ್ಪಿಸಿರುವುದು ವಿಪರ್ಯಾಸವೇ ಸರಿ.

## ಬರಗಾಲದ ಹೋರಾಟ

೧೯೬೩-೬೪ರ ಸಾಲಿನಲ್ಲಿ ರಾಯಚೂರು ಪ್ರದೇಶಕ್ಕೆ ಒಳಪಡುವ, ರಾಯಚೂರು, ದೇವದುರ್ಗ ಮತ್ತು ಮಾನ್ವಿ ತಾಲ್ಲೂಕುಗಳಲ್ಲಿ ನೈಸರ್ಗಿಕ ವಿಕೋಪದಿಂದಾಗಿ ತೀವ್ರ ಬರಗಾಲ ಬಂದಿತ್ತು. ಇದರಿಂದ ಇಲ್ಲಿನ ರೈತರ ಆಹಾರದ ಅಭಾವ, ವ್ಯವಸಾಯದ ಕುಂಠಿತ ಮತ್ತು ಜಾನುವಾರುಗಳ ಸಾವು ನೋವುಗಳು ಸಂಭವಿಸಿತು. ರೈತರು ಸರಕಾರಕ್ಕೆ ಮನವಿ ಸಲ್ಲಿಸಿದರು. ಸರಕಾರ ಯಾವುದೇ ಕ್ರಮ ಕೈಗೊಳ್ಳಲಿಲ್ಲ. ಪರಿಣಾಮವಾಗಿ ರೈತ ಸಂಘಟನೆಗಳು ಹೋರಾಟಕ್ಕೆ ಇಳಿದವು ಎಂಬ ರೀತಿಯ ವಿವರಗಳು ಜನಜನಿತವಾಗಿವೆ.

ರಾಯಚೂರು ಪ್ರದೇಶದಲ್ಲಿ ಪ್ರಪ್ರಥಮವಾಗಿ ಮಸರಕಲ್ ಗ್ರಾಮದಲ್ಲಿ ೧೯೭೨-೭೩ರ ಬರಗಾಲ ಸಂದರ್ಭದಲ್ಲಿ ಬರಗಾಲದ ಪರಿಹಾರಕ್ಕೆ ನಡೆದ ಈ ಹೋರಾಟದ ನಾಯಕತ್ವವನ್ನು ಚಂದ್ರಶೇಖರ ಬಾಳೆ ವಹಿಸಿದ್ದರು. ೩೦೦-೪೦೦ ಜನ ಸೇರಿ ಕಂದಾಯ ಇಲಾಖೆಗೆ ಮುತ್ತಿಗೆ ಹಾಕಿ ಬರಗಾಲ ಪರಿಹಾರ ಪಡೆದಿರುವುದೇ ಮೊದಲ ರೈತ ಚಳವಳಿ.

೧೯೯೩-೯೪ರಲ್ಲಿ ಪ್ರಕೃತಿ ವಿಕೋಪದಿಂದಾಗಿ ದೊಡ್ಡ ಪ್ರಮಾಣದಲ್ಲಿ ಬಹಳಷ್ಟು ಹಳ್ಳಿಗಳು ಮುಳುಗಿಹೋಗಿದ್ದವು. ರೈತರು ತಮ್ಮ ದನಕರುಗಳನ್ನು ಕಳೆದುಕೊಂಡಿದ್ದರು. ಬೆಳೆ ನಷ್ಟ ಆಗಿತ್ತು. ರಾಯಚೂರು, ಮಾನ್ವಿ ಮತ್ತು ದೇವದುರ್ಗ ಜನರು ರಾಯಚೂರು ಕಂದಾಯ ಇಲಾಖೆಗೆ ಹೋರಾಟದ ಮುಖಾಂತರ ಬಂದಾಗ ಕಂದಾಯ ಸಚಿವ ರಾಜಶೇಖರ ಮೂರ್ತಿ ಅವರು ಹೆಲಿಕ್ಯಾಪ್ಟರ್‌ನಲ್ಲಿ ವೀಕ್ಷಣೆ ಮಾಡಿ, ಅಧಿಕಾರಿ ಜೊತೆಯಲ್ಲಿ ಚರ್ಚೆಯಲ್ಲಿ ಮುಳುಗಿ ಹೋಗಿದ್ದರು. ಇಂತಹ ಸಂದರ್ಭದಲ್ಲಿ ಮಲ್ಲಯ್ಯ ಜಾಲಹಳ್ಳಿ ನೇತೃತ್ವದಲ್ಲಿ ಸುಮಾರು ೧೦೦೦-೧೫೦೦ ಜನ ರೈತರು ಏಕಕಾಲಕ್ಕೆ ಜಿಲ್ಲಾಧಿಕಾರಿ ಇಲಾಖೆಗೆ ನುಗ್ಗಿ ಕಚೇರಿಗೆ ಬೀಗ ಹಾಕಿದ್ದು ರಾಯಚೂರು ಇತಿಹಾಸದಲ್ಲಿ ಮೊದಲನೆಯದು (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯-೦೨-೨೦೦೭). ಕಚೇರಿ ಒಳಗೆ, ಸಚಿವರು, ಜಿಲ್ಲಾಧಿಕಾರಿ, ಶಾಸಕರು ಮತ್ತು ಸಂಸದರು, ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳು ಸಭೆ ನಡೆಸುತ್ತಿರುವ ಸಂದರ್ಭದಲ್ಲಿ ಬೀಗ ಮುದ್ರೆ

ಜಡಿದು ನಂತರ ಸರ್ಕಾರ ಮನವಿ ಮಾಡಿದಾಗ ತೆಗೆಯಲಾಯಿತು. ನಂತರ ಜಿಲ್ಲಾಧಿಕಾರಿ ಪಂಚಾಯ್ತಿ ರೂಪದಲ್ಲಿ ಕುಳಿತುಕೊಂಡು ರೈತರ ಸಮಸ್ಯೆಗಳಿಗೆ ಸ್ಪಂದಿಸಿದರು. ಈ ಹೋರಾಟದ ಫಲವಾಗಿ ಸುಮಾರು ೩ ಲಕ್ಷ ರೂ. ಪರಿಹಾರ ಕೊಡಿಸಲಾಯಿತು (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯-೦೨-೨೦೦೭).

ಅಲ್ಲದೇ ಈ ಹೋರಾಟದ ಭಾಗವಾಗಿ ಹೊಳೆದಂಡೆಯಲ್ಲಿ ಬರುವ ೧೨ ಹಳ್ಳಿಗಳು ಮತ್ತು ಹುಣಿಚಾಲಹುಡ ಕೆರೆ ಹಿಂದೆ ಬರುವ ಗೋವಿಂದಪಲ್ಲೆ ಕೆರೆಹಳ್ಳಕ್ಕೆ ಕೊಚ್ಚಿ ಹೋಗುವಂಥ ಸುಮಾರು ೨೫ ಹಳ್ಳಿಗಳನ್ನು ಗುರುತಿಸಿ ಈ ಗ್ರಾಮಗಳು ವಸತಿ ಯೋಗ್ಯ ಅಲ್ಲವೆಂದು ಈ ಗ್ರಾಮಕ್ಕೆ ಪುನರ್ ವಸತಿ ನೀಡಬೇಕೆಂದು ಯೋಜನೆ ಮಾಡಲಾಯಿತು. ಇದಕ್ಕಾಗಿ ಹೋರಾಡಿದ ಪರಿಣಾಮವಾಗಿ ಪುನರ್ ವಸತಿ ನೀಡಲಾಗಿದ್ದು, ಈ ಸಮಸ್ಯೆಯನ್ನು ಇನ್ನೂ ಬಗೆಹರಿಸಬೇಕಾಗಿದೆ (ಸಂದರ್ಶನ: ಮಲ್ಲಯ್ಯ ಜಾಲಹಳ್ಳಿ, ೧೯-೦೨-೨೦೦೭). ಈ ಹೋರಾಟದ ಪರಿಣಾಮವಾಗಿ ಸರಕಾರವು ರೈತರ ಸಮಸ್ಯೆಗಳ ಪರಿಹಾರಕ್ಕೆ ಯೋಜನೆಗಳನ್ನು ರೂಪಿಸಿತು. ಅದರಂತೆ ಕೃಷಿಗೆ ಬೇಕಾದ ಸೌಲಭ್ಯಗಳನ್ನು ಒದಗಿಸಿತು. ಸ್ವಲ್ಪಮಟ್ಟಿನ ಬರಗಾಲದ ಪರಿಹಾರ ನಿಧಿಯನ್ನು ಬಿಡುಗಡೆ ಮಾಡಿತು.

## ನಕ್ಸಲೈಟ್ ಹಿನ್ನೆಲೆಯ ರೈತ ಕೂಲಿಕಾರ್ಮಿಕರ ಸಂಘದ ರಾಯಚೂರು ಹೋರಾಟ

ನಕ್ಸಲೈಟ್ ಹಿನ್ನೆಲೆಯ ಚಳವಳಿಗಳ ಕುರಿತು ತಂಬಂಡ್ ವಿಜಯ್ ಪೂಣಚ್ಚ ಅವರು "ರೈತ ಚಳವಳಿಗಳು"(ಏಕೀಕರಣೋತ್ತರ ಕರ್ನಾಟಕದ ಚಳುವಳಿ) ಪುಸ್ತಕದಲ್ಲಿ (ಪೂಣಚ್ಚ, ೧೯೯೯ : ೫೮-೫೯). ಮತ್ತು "ಕನ್ನಡ ವಿಶ್ವವಿದ್ಯಾಲಯದ ವಿಶ್ವಕೋಶ ೪, ಚರಿತ್ರೆ" ಎನ್ನುವ ಗ್ರಂಥದಲ್ಲಿ ವಿಶ್ಲೇಷಣೆ ನೀಡಿದ್ದಾರೆ (ಪೂಣಚ್ಚ, ೨೦೦೧ : ೮೬೧-೮೬೨). ಇವರ ಸಂಶೋಧನೆಯ ಭಾಗಗಳನ್ನು ಈ ಭಾಗದಲ್ಲಿ ವಿವರವಾಗಿ ಬಳಸಿಕೊಳ್ಳಲಾಗಿದೆ.

ಕರ್ನಾಟಕದ ಅತ್ಯಂತ ಹಿಂದುಳಿದ ಪ್ರದೇಶವೆಂದು ಯಾವತ್ತೋ ಪರಿಗಣಿಸಲಾದ ರಾಯಚೂರು ಪ್ರದೇಶದಲ್ಲಿ ನಕ್ಸಲೈಟ್ ಹಿನ್ನೆಲೆಯ "ರೈತ ಕೂಲಿ ಕಾರ್ಮಿಕರ ಸಂಘ"ವು ರೈತರನ್ನು ಸಂಘಟಿಸುವಲ್ಲಿ ೧೯೯೦ರ ದಶಕದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ. ಭಾರತದಲ್ಲಿನ ಪ್ರಜಾಪ್ರಭುತ್ವ ಮಾದರಿಯನ್ನೇ ನಿರಾಕರಿಸುವ ಈ ಸಂಸ್ಥೆ-ಸಂಘಟನೆ ಕಡು ಎಡಪಂಥೀಯ ಧೋರಣೆಯನ್ನು ಹೊಂದಿದೆ. ರಾಜಕೀಯವಾಗಿ ಸಿ.ಪಿ.ಐ.(ಎಂ.ಎಲ್) ಪೀಪಲ್ಸ್ ವಾರ್ ಗ್ರೂಪ್ ಎನ್ನುವ ಸಂಘಟನೆಯೊಂದಿಗೆ ಗುರುತಿಸಿಕೊಳ್ಳುವ ರೈತ ಕೂಲಿ ಕಾರ್ಮಿಕರ ಸಂಘದ ಜೊತೆ ಜೊತೆಗೆ ಪಿ.ಡಬ್ಲ್ಯೂ.ಜಿ.ಯ ಇನ್ನಿತರ ಸಂಘದ ಜೊತೆಗೆ ಪಿ.ಡಬ್ಲ್ಯೂ.ಜಿ.ಯ ಇನ್ನಿತರ ಘಟಕಗಳಾದ ಕರ್ನಾಟಕ ವಿಮೋಚನಾ ರಂಗ, ಪೀಪಲ್ಸ್ ಡೆಮಾಕ್ರೆಟಿಕ್ ಫೋರಂ, ಪ್ರಗತಿಪರ ವಿದ್ಯಾರ್ಥಿ ಕೇಂದ್ರ ಹಾಗೂ ಪ್ರಗತಿಪರ ಯುವಜನ ಸಂಘಗಳ ಸಹಕಾರದೊಂದಿಗೆ ರೈತರ ಸಮಸ್ಯೆಗಳಿಗೆ ತನ್ನದೇ ಆದ ರೀತಿಯಲ್ಲಿ ಪರಿಹಾರ ಕೊಂಡುಕೊಳ್ಳಲು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಈ ಸಂಸ್ಥೆಗಳ ಮುಖವಾಣಿಯಾದ ಜನವಿಮುಕ್ತಿ (ಸೆಪ್ಟೆಂಬರ್ ೧೯೯೮) ಪ್ರಕಾರ

## ನಕ್ಸಲೈಟ್ ಹಿನ್ನೆಲೆಯ ರೈತ ಕೂಲಿಕಾರ್ಮಿಕರ ಸಂಘದ ರಾಯಚೂರು ಹೋರಾಟ




ಆಕರ ಸ್ಫೂರ್ತಿ : ತುಕಾರಾಂ ಎಸ್. ಮತ್ತು ರಾಜು ಬಿ., ಸಾಕ್ಷರತಾ ದಾರಿಯ ಸಾವಿರ ಹೆಜ್ಜೆ (ಕರ್ನಾಟಕ ರಾಜ್ಯ ಸಾಕ್ಷರತಾ ಆಂದೋಲನದ ದಶಕದ ಸಾಧನೆಗಳು), ನಿರ್ದೇಶಕರು, ರಾಜ್ಯ ಸಂಪನ್ಮೂಲ ಕೇಂದ್ರ, ಮೈಸೂರು, ೨೦೦೦, ಪು.೪೩

''ಕರ್ನಾಟಕದ ರೈತ ಕೂಲಿ ಸಂಘದ ಹೋರಾಟವು ರೈತ ಕೂಲಿಗಳಲ್ಲಿ ಸ್ವಾಭಿಮಾನದ ಕಿಚ್ಚನ್ನು ಹಚ್ಚಿ ಹೋರಾಟಕ್ಕೆ ಪ್ರೇರೇಪಿಸಿರುವುದಷ್ಟೇ ಅಲ್ಲ, ತನ್ನ ಸ್ಪಷ್ಟ ಸೈದ್ಧಾಂತಿಕ ತಿಳಿವಳಿಕೆಯ ಮೂಲಕ ಭೂ ಮಾಲೀಕತ್ವವನ್ನು ಸಂರಕ್ಷಿಸುತ್ತಿರುವ ಪ್ರಭುತ್ವದ ಸ್ವರೂಪವನ್ನು ಬಯಲು ಮಾಡುತ್ತಿದೆ (ಪೂಣಚ್ಚ, ೧೯೯೯ : ೫೮-೫೯).

ರಾಯಚೂರಿನಲ್ಲಿ ಸಮಸ್ಯೆಯಿರುವುದು ಭೂಮಾಲೀಕರಿಗೂ ಮತ್ತು ಕೃಷಿಕೂಲಿಕಾರರಿಗೂ ಎಂದು ಸಂಘವು ಅಭಿಪ್ರಾಯಪಟ್ಟರೆ, ಸರಕಾರದ ದೃಷ್ಟಿಯಲ್ಲಿ ಸರಕಾರಕ್ಕೂ ಮತ್ತು ರೈತ ಕೂಲಿಕಾರರ ಸಂಘಕ್ಕೂ ನಡುವೆ ಇರುವ ಭಿನ್ನತೆ-ವೈಮನಸ್ಸುಗಳು ಸಮಸ್ಯೆಯ ಇನ್ನೊಂದು ಮುಖ ಎಂದು ಅಭಿಪ್ರಾಯಪಡಬಹುದು.

''ಪೋಲಿಸ್ ಕಾರ್ಯಚರಣೆಗಳು ಕಾನೂನು ಸುವ್ಯವಸ್ಥೆ ಕಾಪಾಡುವುದಕ್ಕಿಂತ ಹೆಚ್ಚಾಗಿ ಹಳ್ಳಿಯ ರೈತರು ಸಂಘ ಕಟ್ಟಿಕೊಳ್ಳದಂತೆ ಅದರಲ್ಲೂ ಕರ್ನಾಟಕ ರೈತ ಕೂಲಿ ಸಂಘಕ್ಕೆ ಸೇರದಿರುವಂತೆ ಮಾಡುವುದಕ್ಕಾಗಿಯೇ ಆಗಿದೆಯೆಂದು ರಾಯಚೂರಿನ ಹಳ್ಳಿಗಳಲ್ಲಿ ನಡೆಯುತ್ತಿರುವ ದೌರ್ಜನ್ಯದ ಕುರಿತು ರಚಿಸಲಾದ ಈ ಸತ್ಯಶೋಧಕ ಸಮಿತಿಯು ವರದಿ ಮಾಡಿದೆ. ಈ ಸತ್ಯಶೋಧಕ ಸಮಿತಿಯಲ್ಲಿ ಪೀಪಲ್ಸ್ ಡೆಮಾಕ್ರಟಿಕ್ ಫೋರಂನ ಪ್ರೊ.ಬಾಬಯ್ಯ ಮೊದಲಾದವರಿದ್ದರೆಂದು ೧೯೯೭ರ ಮೇ-ಜೂನ್ 'ಜನವಿಮುಕ್ತಿ' ಸಂಚಿಕೆಯು ತಿಳಿಸುತ್ತದೆ (ಪೂಣಚ್ಚ, ೧೯೯೯ : ೫೯).

ಭೂಮಿಗೆ ಸಂಬಂಧಿಸಿದ ಪ್ರಶ್ನೆಗಳು ಇಲ್ಲಿ ಗಾಢವಾಗಿದೆ. ಭೂಮಾಲೀಕರು ಅನುಭವಿಸುತ್ತಿದ್ದ ಹೆಚ್ಚುವರಿ ಭೂಮಿ, ಇನಾಮ್ತಿ ಭೂಮಿಗಾಗಿ ರೈತ ಕೂಲಿ ಕಾರ್ಮಿಕರ ಸಂಘದ ನೇತೃತ್ವದಲ್ಲಿ ಅಲ್ಲಿನ ಬಡರೈತರು ಹೋರಾಟ ಮಾಡುತ್ತಿದ್ದಾರೆ. ರಾಯಚೂರಿನ ಜೇಗರ್‌ಕಲ್‌ನಲ್ಲಿ ೧೪೦ ಎಕರೆ ಇನಾಮ್ತಿ ಭೂಮಿಯನ್ನು ಅಲ್ಲಿಯ ಭೂಮಾಲೀಕನೊಬ್ಬ ಅನುಭವಿಸುತ್ತಿದ್ದುದ್ದನ್ನು ಸಂಘವು ಪ್ರತಿಭಟನೆ ಮೂಲಕ ಹೋರಾಟ ಆರಂಭಿಸಿತು. ಕೂರ್ತಕುಂದಾ, ದೇವಸೂಗೂರುಗಳಲ್ಲಿ ಭೂಮಾಲಿಕರು ಅಕ್ರಮವಾಗಿ ಹೆಚ್ಚುವರಿ ಭೂಮಿಯನ್ನು ಅನುಭವಿಸುತ್ತಿದ್ದಾರೆಂದು ಸಂಘವು ದೂರಿರುವುದನ್ನು ನಾವು ಕಾಣಬಹುದು. ಈ ಹಿನ್ನೆಲೆಯಲ್ಲಿ ಭೂರಹಿತರಿಗೆ ಈ ರೀತಿಯ ಭೂಮಿಗಳನ್ನು ಆಕ್ರಮಿಸಿಕೊಳ್ಳಲು ಸಂಘವು ಪ್ರೇರೇಪಿಸಿದಾಗ ಸಮಸ್ಯೆ ಬಿಗಾಡಾಯಿಸತೊಡಗಿತು (ಪೂಣಚ್ಚ, ೧೯೯೯ : ೫೯).

ವಿಜಯ್ ಪೂಣಚ್ಚ ಅವರ ಲೇಖನದ ಪ್ರಕಾರ, ಭೂಮಾಲಿಕರು ಪೋಲಿಸರ ಸಹಾಯದಿಂದ ಭೂಹೀನ ರೈತರನ್ನು ಬಗ್ಗು ಬಡಿಯುತ್ತಿದ್ದಾರೆಂದು ಸಂಘವು ಆಪಾದಿಸಿತು. ನ್ಯಾಯಕ್ಕಾಗಿ ಹೋರಾಡಿದ ರೈತರನ್ನು ಕಗ್ಗೊಲೆ ಮಾಡುತ್ತಿದೆಯೆಂದು ಸಂಘ ಆಪಾದಿಸಿತು. ಇತ್ತೀಚಿನ ಕೆಲವು ಘಟನೆಗಳ ಮೂಲಕ ಈ ಸಮಸ್ಯೆಯನ್ನು ಅರ್ಥ ಮಾಡಿಕೊಳ್ಳಲು ಇಲ್ಲಿ ಪ್ರಯತ್ನಿಸಲಾಗಿದೆ. ೧೯೯೮ರ ಸೆಪ್ಟೆಂಬರ್ ತಿಂಗಳ 'ಜನವಿಮುಕ್ತಿ' ಪತ್ರಿಕೆಯು ಅಪ್ಪನ ದೊಡ್ಡಿ ಗ್ರಾಮದ ಭೂಮಾಲೀಕ ನರಸಿಂಹಲು ಮಾಡಿರುವ ಅನ್ಯಾಯ, ಅಕ್ರಮ, ಅತ್ಯಾಚಾರಗಳಿಗೆ ಸೂಕ್ತ ಶಿಕ್ಷೆಯನ್ನು ನೀಡದೆ ಓಡಿ ಹೋದ ತಹಶೀಲ್ದಾರನ ಕ್ರಮವನ್ನು

ಖಂಡಿಸುತ್ತ ಈ ರೈತಸಂಘವು "ಈ ಭೂಮಾಲೀಕನಿಗೆ ಪ್ರಭುತ್ವ ನೀಡದ ಶಿಕ್ಷೆಯನ್ನು ಕೊಡಲಾಗಿದೆ" ಎಂದು ಬರೆಯಿತು (ಪೂಣಚ್ಚ, ೧೯೯೯ : ೫೯-೬೦).

೧೯೯೯ರ ಮೇ-ಜೂನ್ ಸಂಚಿಕೆಯಲ್ಲಿ "ಜನವಿಮುಕ್ತಿ" ಪತ್ರಿಕೆ ಅನ್ಯಾಯದ ವಿರುದ್ಧ ಹೋರಾಡಿ ರಾಯಚೂರಿನ ಭೂಮಾಲೀಕರಿಂದ ಹತರಾದ ಕಾಮ್ರೇಡ್ ಬುಡ್ಡಣ್ಣನವರ ಹತ್ಯೆಯನ್ನು ತೀವ್ರವಾಗಿ ಖಂಡಿಸಿದೆ. ೧೯೯೭ರಲ್ಲಿ ಊರಿನ ಭೂಮಾಲೀಕರೆಲ್ಲಾ ಒಂದಾಗಿ ದಲಿತರೊಬ್ಬರ ಜಮೀನನ್ನು ಸಾಹುಕಾರನೊಬ್ಬನಿಗೆ ಕಸಿದುಕೊಟ್ಟ ಸಂದರ್ಭದಲ್ಲಿ ಬುಡ್ಡಣ್ಣನವರ ನೇತೃತ್ವದಲ್ಲಿ ರೈತ ಕೂಲಿ ಕಾರ್ಮಿಕರ ಸಂಘವು ಪ್ರತಿಭಟಿಸಿದ್ದರ ಸೇಡಿಗಾಗಿ ಭೂಮಾಲೀಕರು ಹಾಗೂ ಪೋಲೀಸರ ನಿರ್ದೇಶನದಂತೆ ಬುಡ್ಡಣ್ಣನವರ ಕೊಲೆ ನಡೆದಿದೆ ಎಂದು "ಜನವಿಮುಕ್ತಿ" ಬರೆದಿದೆ (ಪೂಣಚ್ಚ, ೧೯೯೯ : ೫೯-೬೦).

ಈ ರೀತಿಯ ದೌರ್ಜನ್ಯಗಳ ಕುರಿತು ಪೀಪಲ್ಸ್ ವಾರ್ ಗ್ರೂಪ್‌ನ ಸತ್ಯಶೋಧಕ ಸಮಿತಿಯೂ ವರದಿ ಮಾಡಿದೆ. ಈ ಸಮಿತಿಯು ಸರ್ಕಾರದ ಮುಂದೆ ಇಟ್ಟ "ಒತ್ತಾಯಗಳ" ಪ್ರಕಾರ ಪೋಲೀಸರ ದೌರ್ಜನ್ಯಗಳ ಬಗ್ಗೆ ಹಾಗೂ ಇದರ ಹಿಂದಿರುವ ಭೂಮಾಲೀಕರ-ಪೋಲೀಸ್-ರಾಜಕಾರಣಿ ಪಟ್ಟಭದ್ರ ಮೈತ್ರಿಕೂಟಗಳ ಬಗ್ಗೆ ತನಿಖೆ ನಡೆಯಲು ಹಾಲಿ ನ್ಯಾಯಾಧೀಶರಿಂದ ನ್ಯಾಯಾಂಗ ತನಿಖೆಯಾಗಬೇಕು ಹಾಗೂ ದಲಿತರಿಗೆ ಸೇರಬೇಕಾದ ಭೂಮಿಯನ್ನು ವಶಪಡಿಸಿಕೊಂಡು ಅವರ ಸಹಜ ಅಭಿವೃದ್ಧಿಗೆ ಅಡ್ಡಿಯೊಡ್ಡುತ್ತಿರುವ ಭೂಮಾಲೀಕರು ಮತ್ತು ಇದಕ್ಕೆ ಬೆಂಬಲಿಸುತ್ತಿರುವ ಪೋಲೀಸ್ ಅಧಿಕಾರಿಗಳ ಮೇಲೆ "ಎಸ್.ಸಿ.ಎಸ್.ಟಿ. ಅಟ್ರಾಸಿಟಿಸ್ ಪ್ರಿವೆನ್ಷನ್ ಆ್ಯಕ್ಟ್ ೧೯೮೫" ಕಾನೂನಿನಡಿ ಕೇಸು ದಾಖಲಿಸಿ, ಬಂಧಿಸಿ ವಿಚಾರಣೆಗೊಳಪಡಿಸಬೇಕು ಎಂದು ಸಮಿತಿ ಒತ್ತಾಯಿಸಿದೆ. ಈ ಸಮಿತಿಯು ಮುಂದುವರಿಯುತ್ತ, ಸಂತ್ರಸ್ತರಾದ ದಲಿತ ರೈತರಿಗೆ ಇದೇ ಕಾನೂನಿನಡಿ ಕೂಡಲೇ ಮಧ್ಯಂತರ ಪರಿಹಾರ ಒದಗಿಸಬೇಕು. ಹಾಗೂ ಪೋಲೀಸ್ ದೌರ್ಜನ್ಯಕೊಳ್ಳಗಾದ ರೈತರಿಗೆ ಕೂಡಲೇ ಕ್ರಮ ತೆಗೆದುಕೊಳ್ಳಬೇಕು (ಪೂಣಚ್ಚ,೨೦೦೧ : ೮೬೧).

ರೈತರನ್ನು ಬಡ್ಡಿಕೋರರ ಶೋಷಣೆಯಿಂದ ಮುಕ್ತಗೊಳಿಸಲು ಸುಲಭ ದರದ ಸಾಲ ಒದಗಿಸಬೇಕು. ಭೂ-ಸುಧಾರಣೆ ಸಂಪೂರ್ಣವಾಗಿ ಜಾರಿಯಾಗಬೇಕು ಎಂದು ಆಗ್ರಹಿಸಿದ ಈ ಸಮಿತಿಯು ಕರ್ನಾಟಕ ರೈತ ಕೂಲಿಕಾರ್ಮಿಕರ ಸಂಘದ ಕಾನೂನುಬದ್ಧ ಚಟುವಟಿಕೆಗಳಿಗೆ ಸರಕಾರ ಸಂಪೂರ್ಣವಾಗಿ ಅವಕಾಶ ಮಾಡಿಕೊಡಬೇಕು" ಎಂದು ಸರಕಾರವನ್ನು ಒತ್ತಾಯಿಸಿತು (ಪೂಣಚ್ಚ,೨೦೦೧ : ೮೬೧).

೧೯೯೯ರ ಏಪ್ರಿಲ್ ೯,೧೦,೧೧ರಂದು ಸುಮಾರು ೧೫ ಹಳ್ಳಿಗಳನ್ನು ಸಂದರ್ಶಿಸಿದ ಈ ಸಮಿತಿಯು "ಒತ್ತಾಯಗಳ" ಬಗ್ಗೆ ಚರ್ಚೆ ನಡೆಯುತ್ತಿದ್ದಾಗಲೇ ೧೯೯೯ ಜೂನ್ ೨೬ರ "ಡೆಕ್ಕನ್ ಹೆರಾಲ್ಡ್" ವರದಿಯೊಂದು ನನ್ನ ಗಮನವನ್ನು ಸೆಳೆಯಿತು. ಈ ಪತ್ರಿಕಾ ವರದಿಯು "ಉದಯ" ಎನ್ನುವ ವ್ಯಕ್ತಿಯ

ಸಹಿ ಇರುವ ಪತ್ರವೊಂದು ಕಾಮ್ರೇಡ್ ಬುಡ್ಡಣ್ಣನ ಕೊಲೆಯನ್ನು ಹಾಗೂ ಅದರ ಹಿಂದಿನ ದೌರ್ಜನ್ಯಗಳನ್ನು ವಿವರಿಸಿ, ಬಡವರು ಮತ್ತು ಭೂಹೀನ ಕಾರ್ಮಿಕರನ್ನು ದೌರ್ಜನ್ಯ ಮಾಡಿದ ಭೂಮಾಲೀಕ ಸಿದ್ಧನಗೌಡನಿಗೆ ಮರಣ ದಂಡನೆಯನ್ನು ಕೊಡಲಾಗಿದೆ ಎಂದು ತಿಳಿಸಿತು.

ಸಿದ್ಧನಗೌಡ ಕೊಲೆಯನ್ನು ಸಿ.ಪಿ.ಐ(ಎಂ.ಎಲ್) ಅಂದರೆ ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ (ಮಾರ್ಕಿಸ್ಟ್ -ಲೆನಿನಿಸ್ಟ್) ಸಂಘಟನೆ ಮಾಡಿದೆಯೆಂದೂ ಈ ಪತ್ರ ಹೇಳಿಕೊಳ್ಳುವುದರ ಜೊತೆಗೆ "ಮುಂದೆ ಯಾರದರೂ ಸಿದ್ಧನಗೌಡನ ರೀತಿ ದೌರ್ಜನ್ಯ ಮಾಡಿದರೆ ಅವರಿಗೂ ಇದೇ ಗತಿಯಾಗುವುದು" ಎಂದು ಎಚ್ಚರಿಸಿರುವ ವಿಚಾರ ತಿಳಿದುಬರುತ್ತದೆ. ಭೂಮಾಲೀಕರು ಹಾಗೂ ರೈತಕೂಲಿ ಕಾರ್ಮಿಕರಿಗೂ ಇರುವ ಭೂ ಸಂಬಂಧ ಪ್ರಶ್ನೆಗಳು ಇಂದು "ಪ್ರಜಾಪ್ರಭುತ್ವ ವಾದಿಗಳ" ಹಾಗೂ ಅದರ ವಿರೋಧಿಗಳ ಸಂಘರ್ಷದ ಸ್ವರೂಪದಲ್ಲಿ ಕಾಣಿಸಿಕೊಳ್ಳುತ್ತಿದೆ. ಇದಕ್ಕೆ ರಾಯಚೂರಿನಲ್ಲಿ ನಡೆಯುತ್ತಿರುವ ಭೂಸಂಬಂಧೀ ಪ್ರಶ್ನೆಗಳೇ ಮುಖ್ಯ ಸಾಕ್ಷಿಗಳಾಗುತ್ತವೆ (ಪೂಣಚ್ಚ,೨೦೦೧ : ೮೬೨).

ನಕ್ಸಲೈಟ್ ಹಿನ್ನೆಲೆಯ ಕೂಲಿಕಾರ್ಮಿಕರ ಹೋರಾಟವು ಮೂಲತಃ ಆರ್ಥಿಕ ಸ್ವರೂಪವನ್ನು ಒಳಗೊಂಡಿದೆ. ಮುಖ್ಯವಾಗಿ ರಾಯಚೂರು ಪ್ರದೇಶವು ಆರ್ಥಿಕ ಸಂಪನ್ಮೂಲಗಳಿಂದ ಕೊರತೆ ಎದುರಿಸುತ್ತಿದ್ದು, ಇಲ್ಲಿನ ಕೂಲಿಕಾರ್ಮಿಕರು ಭೂಮಾಲೀಕರನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಬಹುತೇಕ ಸಂಘಟನೆಗಳು ಹೋರಾಟದ ಸ್ವರೂಪವನ್ನು ಆಧರಿಸಿ ದಬ್ಬಾಳಿಕೆ, ಬಂಡಾವಳಶಾಹಿ ಪ್ರಭುತ್ವ ಮುಂತಾದ ವಿಚಾರಗಳನ್ನು ಖಂಡಿಸಿತು. ಈ ಮುಖಾಂತರ ರೈತರಿಗೆ ಆಗುತ್ತಿದ್ದ ಶೋಷಣೆ ಮತ್ತು ಇತರ ಕ್ರೂರ ಅನ್ಯಾಯಗಳನ್ನು ಎತ್ತಿತೋರಿಸಿ, ಇದರಿಂದ ಭೂಮಾಲೀಕರು ಹೆಚ್ಚುವರಿ ಉತ್ಪಾದನೆ ಪಡೆದು ಕೂಲಿ ಕಾರ್ಮಿಕರನ್ನು ಶೋಷಣೆ ಮಾಡಿ ಮತ್ತಷ್ಟು ದುಸ್ಥಿತಿಗೆ ತಳ್ಳಿದರು. ಪತ್ರಿಕಾ ಮಾಹಿತಿಯನ್ನು ಗಮನಿಸಿದಾಗ ಭೂಮಾಲೀಕರ ಕ್ರೂರ ಪದ್ಧತಿಗಳು ಜನಸಾಮಾನ್ಯರು ಮತ್ತು ಕೂಲಿ ಕಾರ್ಮಿಕರ ಮೇಲೆ ಪ್ರಭಾವ ಬೀರಿರುವುದರಿಂದ ಹತಾಶರಾದ ಸಾಮಾನ್ಯ ಜನತೆ ವರ್ಗ ಹೋರಾಟದ ಕಡೆ ಆಲೋಚಿಸಿದ್ದಾರೆ. ಇದರ ಜೊತೆಗೆ ಪ್ರಭುತ್ವ ಪ್ರೇರಿತ ಅಧಿಕಾರವು ಉಳ್ಳವರ ಪರವಾಗಿ ನಿಂತಿರುವುದು ಈ ಹಿನ್ನೆಲೆಯಲ್ಲಿ ಕೂಲಿಕಾರ್ಮಿಕರು ಸಂಘಟನೆಗಳ ಕಡೆಗೆ ಒಲವು ತೋರಿಸುತ್ತಾರೆ. ಇದರಿಂದ ರಾಯಚೂರು ಪ್ರದೇಶದ ನಕ್ಸಲೈಟ್ ಚಳವಳಿಯು ಕೂಡ ಭಿನ್ನವಾಗಿ ಕಂಡುಬರುತ್ತದೆ.

ರಾಯಚೂರು ಪ್ರದೇಶದಲ್ಲಿ ನಡೆದ ಪ್ರತಿಯೊಂದು ರೈತ ಚಳವಳಿಯು ಸಮಾಜದ ಮೇಲೆ ಮತ್ತು ಇತರರ ಚಳವಳಿಗಳಿಗೆ ಪರಿಣಾಮ ಬೀರುವ ಚಳವಳಿಯಾಗಿವೆ. ಈ ಪ್ರದೇಶದಲ್ಲಿ ರೈತ ಚಳವಳಿಯು ಇತರೆ ಚಳವಳಿಗಿಂತ ಭಿನ್ನ ಚಳವಳಿಯಾಗಿತ್ತು ಎಂಬುದಕ್ಕೆ ಮೇಲಿನ ಚಳವಳಿಗಳೇ ಸಾಕ್ಷಿ ಎಂದು ಹೇಳಬಹುದು.

## ಕಾರ್ಮಿಕ ಚಳವಳಿ

ವಸಾಹತುಶಾಹಿಗಳ ಆಗಮನದಿಂದ ಭಾರತದ ನಾನಾ ಭಾಗಗಳಲ್ಲಿ ಆಧುನಿಕ ಉದ್ಯಮಗಳು ತಲೆಯೆತ್ತಿದವು. ಅದರ ಪರಿಣಾಮವಾಗಿ ಅಂದಿನಿಂದಲೇ ಕಾರ್ಮಿಕರ ಚಳವಳಿಗಳು ರೂಪುಗೊಂಡು ಅವು ಗಟ್ಟಿಗೊಳ್ಳುತ್ತ ಹೋದವು. ಭಾರತದಲ್ಲಿನ ಕಾರ್ಮಿಕ ಚಳವಳಿಯು ಆರಂಭದ ಕಾಲದಿಂದಲೂ ರಾಷ್ಟ್ರೀಯ ಚಳವಳಿಗಳೊಂದಿಗೆ ಗಾಢವಾದ ಸಂಬಂಧವನ್ನು ಬೆಳೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಪರಿಣಾಮವಾಗಿ ಹಲವು ರಾಷ್ಟ್ರಗಳಲ್ಲಿ ಕಾರ್ಮಿಕ ಪಕ್ಷಗಳು ಹುಟ್ಟಿಕೊಂಡು ತಮ್ಮ ಅಸ್ತಿತ್ವವನ್ನು ಕಂಡುಕೊಂಡಿರುವುದನ್ನು ಕಾಣುತ್ತೇವೆ. ಇದರಿಂದ ಕಾರ್ಮಿಕರು ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಮತ್ತು ಮಾಲೀಕರ ದಬ್ಬಾಳಿಕೆಯನ್ನು ತಡೆಯುವ ಸಲುವಾಗಿ ವ್ಯವಸ್ಥಿತವಾಗಿ ಹೋರಾಡಲು ಹಲವು ರೂಪುರೇಷೆಗಳನ್ನು ರೂಪಿಸಿಕೊಂಡು ಬಂಡವಾಳಶಾಹಿಗಳ ಹಾಗೂ ಮಾಲೀಕರ ವಿರುದ್ಧ ಹೋರಾಟ ಮಾಡಿರುವುದನ್ನು ಕಾಣುತ್ತೇವೆ. ಇದರ ಪ್ರತಿಫಲವಾಗಿ ರಾಯಚೂರು ಪ್ರದೇಶದಲ್ಲಿ ಹಲವಾರು ಕಾರ್ಮಿಕ ಚಳವಳಿಗಳು ಹುಟ್ಟಿಕೊಂಡವು. ಹೀಗೆ ಹುಟ್ಟಿಕೊಂಡ ಕಾರ್ಮಿಕ ಚಳುವಳಿ ರಾಯಚೂರು ಪ್ರದೇಶದ ಹಟ್ಟಿ ಚಿನ್ನದಗಣಿ, ಹತ್ತಿಗಿರಣಿ ಕಾರ್ಮಿಕರು ಮಾಲೀಕರ ತಮ್ಮ ಬೇಡಿಕೆಗಳ ಈಡೇರಿಕೆಗಾಗಿ ಹೋರಾಟಕ್ಕೆ ಇಳಿದಿರುವುದನ್ನು ಕಾಣುತ್ತೇವೆ.

ಇಲ್ಲಿ ಮಾಲೀಕರು ಕಾರ್ಮಿಕರನ್ನು ಕೇವಲ ದುಡಿಯುವ ವರ್ಗದಂತೆ ಕಾಣುತ್ತಿದ್ದರೇ ಹೊರತು ರಾಷ್ಟ್ರದ ಭವಿಷ್ಯವನ್ನು ರೂಪಿಸುವಲ್ಲಿ ಶಿಲ್ಪಿಗಳು ಎಂದು ತಿಳಿದಿರಲಿಲ್ಲ. ಈ ಅಂಶದಲ್ಲಿ ರಾಯಚೂರು ಪ್ರದೇಶದಲ್ಲಿ ಇಂತಹ ಅನಿಷ್ಟ ಪದ್ಧತಿಗಳನ್ನು ತಾಳಲಾರದೇ ಇಲ್ಲಿನ ಕಾರ್ಮಿಕರು ಹಿತರಕ್ಷಣೆಗಾಗಿ ಚಳವಳಿ ಹೂಡಿದರು(ವೆಂಕಟರಾವ್, ೧೯೮೫ : ೨೮೧). ಕೈಗಾರಿಕೆಗಳಲ್ಲಿ ದುಡಿಯುವ ಕಾರ್ಮಿಕರು ತಮ್ಮ ಹಿತಾಸಕ್ತಿಗಳನ್ನು ರಚಿಸಿಕೊಳ್ಳಲು, ಆರ್ಥಿಕವಾಗಿ, ಸಾಮಾಜಿಕವಾಗಿ, ಕಲ್ಯಾಣ ಹೊಂದಲು ಸಂಘಗಳನ್ನು ರಚಿಸಿಕೊಂಡಿದ್ದಾರೆ.

ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಭಾರತದ ನಾನಾ ಭಾಗಗಳಲ್ಲಿ ಆಧುನಿಕ ಉಧ್ಯಮಗಳು ತಲೆಯೆತ್ತಿದ್ದವು. ಅದರ ಪರಿಣಾಮ ಕರ್ನಾಟಕದಲ್ಲೂ ಉಂಟಾಯಿತು. ಜೊತೆಗೆ ರಾಯಚೂರು ಪ್ರದೇಶದ ಮೇಲೆ ಪ್ರಭಾವ ಬೀರಿದ ಕಾರ್ಮಿಕ ಚಳವಳಿ ಉಗಮಕ್ಕೆ ಕಾರಣವಾಯಿತು.

ನಾವು ರಾಯಚೂರು ಪ್ರದೇಶದಲ್ಲಿ ನಡೆದ ಕಡಿಮೆ ಕಾರ್ಮಿಕರ ಚಳವಳಿಗಳನ್ನು ಕಾಣುತ್ತೇವೆ. ಇದು ಅಷ್ಟಾಗಿ ದೊಡ್ಡಮಟ್ಟದಲ್ಲಿ ನಡೆದಿಲ್ಲವಾದರೂ, ಸಮಾಜದ ಮೇಲೆ ಪರಿಣಾಮ ಬೀರಿದೆ.[೬]

ವ್ಯವಸ್ಥಿತವಾದ ಒಂದು ಜನ ಸಮುದಾಯದಲ್ಲಿ ತನ್ನ ಜೀವನಕ್ಕೆ ಆಧಾರವಾಗಿ ಸ್ವಂತ ದುಡಿಮೆ ಮಾಡುವುದರ ಮೂಲಕ ಕುಟುಂಬದ ನಿರ್ವಹಣೆಯನ್ನು ಮಾಡುವ ಜನಸಮುದಾಯಗಳನ್ನು ಕಾರ್ಮಿಕರೆಂದು ಕರೆಯಬಹುದು.

ಗ್ರಾಮದಲ್ಲಿನ ಬಡತನ, ಜನಸಂಖ್ಯಾ ಹೆಚ್ಚಳ, ಕೃಷಿ ಭೂಮಿಯ ವಿಭಾಗೀಕರಣ, ದೋಷಪೂರಿತ ಭೂಕಂದಾಯ ವ್ಯವಸ್ಥೆ, ಲೇವಾದೇವಿದಾರರಿಂದ ಕೃಷಿಕರ ಶೋಷಣೆ ಇತ್ಯಾದಿ ಅಂಶಗಳು ಇಂತಹ ಭೂಹೀನ ಕಾರ್ಮಿಕ ವರ್ಗದ ಉದಯಕ್ಕೆ ಕಾರಣವಾದವು. ಇಂತಹ ಪರಿಸ್ಥಿತಿಯನ್ನು ನಾವು ಹಿಂದುಳಿದ ಪ್ರದೇಶದ ರಾಯಚೂರಿನಲ್ಲಿ ಕಾಣುತ್ತೇವೆ. ಬಡತನದ ಬೇಗೆಯಿಂದ ಶೋಷಣೆಗೆ ತುತ್ತಾದ ಜನರು ಕಾರ್ಮಿಕರಾಗಿದ್ದಾರೆ (ಸುಂಕನೂರು, ೨೦೦೬: ೪೪).

ರಾಯಚೂರು ಪ್ರದೇಶದಲ್ಲಿ ನಾವು ಕಾರ್ಮಿಕ ಚಳವಳಿಗಳನ್ನು ಹಟ್ಟಿ ಪ್ರದೇಶದ ಚಿನ್ನದ ಗಣಿಯಲ್ಲಿ ಮತ್ತು ರಾಯಚೂರು ಪ್ರದೇಶದ ಹತ್ತಿ ಗಿರಣಿಯಲ್ಲಿ ಕಾಣಬಹುದು. ಈ ಎರಡು ಚಳವಳಿಗಳು ಒಂದೇ ರೀತಿಯ ಸಮಸ್ಯೆಗಳನ್ನು ಹೊಂದಿದ್ದರೂ ಕೂಡ ಕೆಲವು ಭಿನ್ನವಾದ ಅಂಶಗಳನ್ನು ನಾವು ಕಾಣುತ್ತೇವೆ. ಇದರಲ್ಲಿ ಹಲವಾರು ಕಾರ್ಮಿಕರು ತೊಂದರೆಗೊಳಪಟ್ಟಿದ್ದಾರೆ. ಕಾರ್ಮಿಕರನ್ನು ಕೂಲಿಕಾರರಂತೆ ಕಂಡು ಅವರ ಸಮಸ್ಯೆಗಳಿಗೆ ಬಂಡವಾಳಶಾಹಿಗಳು ಸ್ಪಂದಿಸಲಾರದುದನ್ನು ನಾವು ಕಾಣುತ್ತೇವೆ. ಆದುದರಿಂದ ಇಲ್ಲಿ ಈ ಎರಡು ಹೋರಾಟಗಳು ರಾಯಚೂರು ಪ್ರದೇಶದಲ್ಲಿ ತನ್ನದೇ ಆದ ಪರಿಣಾಮ ಬೀರಿವೆ ಎಂದು ಹೇಳಬಹುದು. ಹತ್ತಿ ಗಿರಣಿಯ ಕಾರ್ಮಿಕ ಚಳವಳಿ ಈ ಕೆಳಗಿನಂತೆ ನೋಡಬಹುದು.

## ಹಟ್ಟಿ ಪ್ರದೇಶದ ಕಾರ್ಮಿಕ ಚಳವಳಿ

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಎಡಪಂಥೀಯ ಸಂಘಟನೆಗಳು ನಡೆಸಿದ ಹೋರಾಟದ ಪರಿಣಾಮದಿಂದಾಗಿ ಆರ್ಥಿಕ ಶೋಷಣೆಯನ್ನು ಅನುಭವಿಸುತ್ತಿದ್ದಂತಹ ಕಾರ್ಮಿಕರಿಗೆ ಅನೇಕ ರೀತಿಯ ಅನುಕೂಲಗಳು ಉಂಟಾದವು. ಇದರ ಪ್ರತಿಫಲವಾಗಿ ಸಂಕಷ್ಟಕ್ಕೊಳಗಾಗಿದ್ದ ಕಾರ್ಮಿಕರು ತಮ್ಮ ನ್ಯಾಯಯುತ ಹಕ್ಕಿಗಾಗಿ ಮಾಲೀಕರ ವಿರುದ್ಧ ಚಳವಳಿಗಳನ್ನು ಹಮ್ಮಿಕೊಂಡರು. ಅದರಲ್ಲಿ ಪ್ರಮುಖವಾಗಿ ರಾಯಚೂರು ಜಿಲ್ಲೆ ಲಿಂಗಸೂಗೂರು ತಾಲ್ಲೂಕಿನ ಹಟ್ಟಿ, ಪ್ರದೇಶ ಚಿನ್ನದ ಗಣಿಯ ಕಾರ್ಮಿಕರ ಚಳವಳಿ ಪ್ರಮುಖವಾದವು. ವಸತಿ ಸೌಲಭ್ಯ, ವೈದ್ಯಕೀಯ ಸೌಲಭ್ಯ, ಗರ್ಭಿಣಿಯರಿಗೆ ಆರೋಗ್ಯ ಸೌಲಭ್ಯ, ವೇತನ ಹೆಚ್ಚಳ ಮತ್ತು ವಾರ್ಷಿಕ ಭತ್ಯೆ ಮುಂತಾದ ಬೇಡಿಕೆಗಳಿಗೆ ಹೋರಾಟ ಮಾಡಿರುವುದನ್ನು ಕಾಣುತ್ತೇವೆ.

೧೯೭೫ರಲ್ಲಿ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಕಾರ್ಮಿಕರ ಚಳವಳಿ ರಾಯಚೂರು ಪ್ರದೇಶದಲ್ಲಿ ತೀವ್ರವಾಗಿ ಬೆಳೆಯಿತು. ೧೯೫೦ಕ್ಕಿಂತ ಪೂರ್ವ ಕಾರ್ಮಿಕರ ಸ್ಥಿತಿಗತಿಗಳು ಶೋಚನೀಯ ಸ್ಥಿತಿಯಿಂದ ಕೂಡಿತ್ತು. ಆ ಸಮಯದಲ್ಲಿ ಯಂತ್ರಗಳು ಉಪಯೋಗವಿರಲಿಲ್ಲ. ಎಲ್ಲ ಕೆಲಸಗಳು ಮಾನವಶಕ್ತಿಯಿಂದಲೇ ನಡೆಯುತ್ತಿತ್ತು. ಕಾರ್ಮಿಕರ ಸಂಖ್ಯೆಯು ಕಡಿಮೆ ಇದ್ದುದರಿಂದಾಗಿ ಕಂಪನಿಯು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿತ್ತು. ಸಾಮಾನ್ಯವಾಗಿ ಇಂತಹ ಸಂದರ್ಭದಲ್ಲಿ ಕಾರ್ಮಿಕರ

ಮೂಲಭೂತ ಪೂರೈಕೆಯು ಆಗುತ್ತಿರಲಿಲ್ಲ. ಕಂಪನಿಯ ಉತ್ತಮ ಬೆಳವಣಿಗೆಯಿಂದಾಗಿ ಕಾರ್ಮಿಕರಿಗೆ ಯಾವುದೇ ಸೌಲಭ್ಯಗಳು ದೊರಕಿಸಿಕೊಡುವಲ್ಲಿ ವಿಫಲವಾಗಿವೆ. ಸೊಸೈಟಿ ವ್ಯವಸ್ಥೆ, ಕಾರ್ಮಿಕ ವಸತಿ ನಿಲಯಗಳು, ಆರೋಗ್ಯ ವ್ಯವಸ್ಥೆ ಮತ್ತು ಶಿಕ್ಷಣ ಸೌಲಭ್ಯಗಳು ಇದ್ದರೂ ಕೂಡ ಅವು ಸರಿಯಾಗಿ ಬಳಕೆಯಾಗುತ್ತಿಲ್ಲ (ವಿಜಯಲಕ್ಷ್ಮಿ, ೨೦೦೬: ೨೩) ಇದಕ್ಕಿಂತ ಪೂರ್ವದಲ್ಲಿ ೧೯೫೦ರಿಂದ ೧೯೭೦ರ ದಶಕದವರೆಗೆ ಕಾರ್ಮಿಕ ಚಳವಳಿ ನಡೆದರೂ ಕೂಡ ಅದು ಅಷ್ಟೊಂದು ಪರಿಣಾಮಕಾರಿ ಪ್ರಭಾವ ಬೀರಲಿಲ್ಲ.



**ಹಟ್ಟಿಪ್ರದೇಶದಲ್ಲಿ ನಡೆದ ನ್ಯಾಯಬದ್ಧ ಹಕ್ಕುಗಳಿಗಾಗಿ ಕಾರ್ಮಿಕರ ಹೋರಾಟ**

೧೯೭೫-೭೬ರ ಸಂದರ್ಭದಲ್ಲಿ ಹಟ್ಟಿ ಚಿನ್ನದ ಗಣಿಯ ಕಾರ್ಮಿಕರನ್ನು ತುಂಬಾ ಹೀನಾಯವಾಗಿ ಆಡಳಿತ ಮಂಡಳಿ ನಡೆಸಿಕೊಳ್ಳುತ್ತಿತ್ತು. ಆಡಳಿತವರ್ಗದವರ ವಿರುದ್ಧ ಸುಮಾರು ೩೫೦೦ ಕಾರ್ಮಿಕರು ಪುನಶ್ಚೇತನಗೊಂಡು ಹಟ್ಟಿ ಪ್ರದೇಶದಿಂದ ರಾಯಚೂರು ಜಿಲ್ಲೆಗೆ ಹೆಂಡತಿಮಕ್ಕಳ ಸಹಿತ ಜಿಲ್ಲಾಧಿಕಾರಿ ಕಾರ್ಯಾಲಯಕ್ಕೆ ಹೋಗಿ ಆಡಳಿತವರ್ಗದ ವಿರುದ್ಧ ಮನವಿ ನೀಡಿರುವುದು ಇಲ್ಲಿನ ಪ್ರಮುಖ ಹೋರಾಟವಾಗಿದೆ. ಇದರ ಪರಿಣಾಮವಾಗಿ ಹಟ್ಟಿ ಚಿನ್ನದ ಗಣಿ ಕಾರ್ಮಿಕರಿಗೆ ಸ್ವಲ್ಪ ಮಟ್ಟಿಗಾದರೂ ಉತ್ತಮ ವ್ಯವಸ್ಥೆಯಾಗಿ ಕಾರ್ಮಿಕರಲ್ಲಿ ಸಂಬಂಧವನ್ನು ಆಡಳಿತವರ್ಗ ಕಂಡುಕೊಂಡಿತು (ಸಂದರ್ಶನ : ಮಹಮದ್ ಮೌಲಾ: ೨೦.೦೨.೨೦೦೭).[೭]

ಹಟ್ಟಿ ಚಿನ್ನದ ಗಣಿಯ ಕಾರ್ಮಿಕರ ಸ್ಥಿತಿಗತಿಗಳ ಬಗ್ಗೆ ನಾಯಕತ್ವ ವಹಿಸಿದವರು ಮಹಮದ್ ಮೌಲಾ, ವಿ.ಕೆ.ನಾಯಕ್ ಮತ್ತು ಅನಂತರಾವ್, ಸುಬ್ಬರಾಯ ಇನ್ನೂ ಮುಂತಾದವರು. ಇಲ್ಲಿ

ಕಾರ್ಮಿಕರನ್ನು ಕೇವಲ ಗುಲಾಮರಂತೆ ಕಂಡಿದ್ದಾರೆ ಹೊರತು ಅವರಿಗೆ ಯಾವುದೇ ರೀತಿಯ ಸೌಲಭ್ಯಗಳನ್ನು ನೀಡಿಲ್ಲ ಎಂಬ ಮಾತು ಕಾರ್ಮಿಕರ ನಾಯಕ ಮಹಮದ ಮೌಲರಿಂದ ಬಂದ ದುಃಖದ ಉಸಿರು ಎಂದು ಹೇಳಬಹುದು (ಸಂದರ್ಶನ : ಮಹಮದ್ ಮೌಲಾ, ೨೦.೦೨.೨೦೦೭).

ಕಾರ್ಮಿಕರ ಸ್ಥಿತಿಗತಿಯು ಯಾವ ರೀತಿಯ ಮಟ್ಟಕ್ಕೆ ಹೋಗಿದೆ ಎಂದರೆ ಇಲ್ಲಿ ದುಡಿಯುವ ಕೈಗಳಲ್ಲಿ ಶಕ್ತಿಯೇ ಇಲ್ಲ. ಅಂತಹ ಈ ವ್ಯವಸ್ಥಿತವಾದ ಕೆಲಸಕಾರ್ಯಗಳನ್ನು ಮಾಡಿ ಮಾನವ ಜನಾಂಗ ಖುಷಿಪಡುವ ಚಿನ್ನವನ್ನು ನಮ್ಮ ಹಟ್ಟಿ ಚಿನ್ನದ ಗಣಿಯ ಕಾರ್ಮಿಕರು ತರುತ್ತಿದ್ದಾರೆ. ಇವರು ಗಣಿ ಲಾಭ ಪಡೆಯುವಲ್ಲಿ ಕಾರ್ಮಿಕರದೇ ಪ್ರಮುಖ ಪಾತ್ರವಿದೆ.

ಇಲ್ಲಿಯ ಕಾರ್ಮಿಕರ ಬಗ್ಗೆ ಯಾವುದೇ ಆಡಳಿತ ವರ್ಗವು ಇಲ್ಲಿಯವರೆಗೆ ಚಿಂತಿಸಿಲ್ಲ. ಅಲ್ಲದೇ ಇಲ್ಲಿ ಹಲವಾರು ಕಾರ್ಮಿಕರು ಚಳವಳಿಗಳನ್ನು ಹಮ್ಮಿಕೊಂಡರೂ ಕೂಡ ಇಲ್ಲಿಯ ಜನತೆ ಅಭಿವೃದ್ಧಿ ಹೊಂದದೆ ಇಲ್ಲಿನ ಪರಿಸ್ಥಿತಿಗೆ ಅನುಗುಣವಾಗಿ ಕೀಳಾಗಿದ್ದಾರೆ (ಸಂದರ್ಶನ : ಮಹಮದ್ ಮೌಲಾ, ೨೦೦೨.೨೦೦೭).

ಮಾಲೀಕ ವರ್ಗ ತಮ್ಮನ್ನು ಮಾನವೀಯವಾಗಿ ನಡೆಸಿಕೊಳ್ಳುತ್ತಿದವರ ವಿರುದ್ಧ ರಕ್ಷಣೆ ಪಡೆಯಲು ಕಾರ್ಮಿಕರು ಬಹಳ ಕಾಲದವರೆಗೆ ಹೋರಾಡಿದ್ದಾರೆ. ಇದುವರೆಗೆ ತಮ್ಮ ಹಿಡಿತದಲ್ಲಿಲ್ಲ ಎಂದು ತಿಳಿದಿದ್ದ ಅನಿಷ್ಟಗಳ ವಿರುದ್ಧ ತಮ್ಮನ್ನು ರಕ್ಷಿಸಿಕೊಳ್ಳಲು ಅವರಿಗೆ ಕಲಿಸಿದ್ದಾರೆ. ವೈಯಕ್ತಿಕ ನೆಲೆಯಲ್ಲಿ ತಾವು ಒಗ್ಗೂಡಿ ಕಾರ್ಯ ನಿರ್ವಹಿಸಿದರೆ ಏನನಾದರೂ ಸಾಧಿಸಬಹುದು ಎಂಬುದನ್ನು ಹಟ್ಟಿ ಜನತೆ ಅಥವಾ ಹಟ್ಟಿ ಚಿನ್ನದ ಗಣಿಯ ಕಾರ್ಮಿಕರು ಅರಿತುಕೊಂಡಿದ್ದಾರೆ.

ಕಾರ್ಮಿಕರ ನಾಯಕರಾದ ಮಹಮದ್ ಮೌಲಾ ಅವರು ನಮಗೆ ದಿನ ದಿನಕ್ಕೆ ಸಮಸ್ಯೆಗಳು ಬರುತ್ತಾ ಇರುತ್ತವೆ. ಇಂತಹ ವಿರುದ್ಧ ನಾವು ಇಡೀ ಕಾರ್ಮಿಕ ಸಂಘಟನೆಯಲ್ಲಿ ಹೋರಾಟದ ಮುಖಾಂತರ ನಮಗೆ ನ್ಯಾಯ ಸಿಗುವವರೆಗೆ ನಾವು ಈ ಹೋರಾಟ ಕೈಬಿಡುವುದಿಲ್ಲ. ಅಲ್ಲದೇ ಕಾರ್ಮಿಕರು ಎಚ್ಚೆತ್ತರೆ ಇವರ ವಿರುದ್ಧ ಆಡಳಿತವರ್ಗವು ಏನೂ ಕೂಡಾ ಮಾಡಲಾಗುವುದಿಲ್ಲ ಎಂಬ ಕೂಗಿನಿಂದ ನಾವು ಇದೇ ರೀತಿಯಾಗಿ ಹೋರಾಟ ಮಾಡುತ್ತಿರುತ್ತೇವೆ' ಎಂದು ಹೇಳಿದ್ದಾರೆ (ಸಂದರ್ಶನ : ಮಹಮದ್ ಮೌಲಾ, ೨೦.೦೨.೨೦೦೭).

ಮೇಲಿನ ಅಂಶಗಳನ್ನು ಗಮನಿಸಿದಾಗ ಮಾಲೀಕರಾಗಲಿ ಅಥವಾ ಸರ್ಕಾರವಾಗಲಿ ಹಟ್ಟಿ ಕಾರ್ಮಿಕರ ಯಾವುದೇ ಸಾಮಾಜಿಕ ಸೌಲಭ್ಯಗಳನ್ನು ಒದಗಿಸದೇ ಇರುವುದು ಕಂಡುಬರುತ್ತದೆ. ಹೀಗಾಗಿ ಇಲ್ಲಿನ ಶ್ರಮಿಕರಾದ ಕಾರ್ಮಿಕರು ಸಂಕಷ್ಟದಲ್ಲಿ ಬದುಕುತ್ತಿರುವುದು ಇನ್ನಷ್ಟು ಚಿಂತೆಗೀಡು ಮಾಡಿದೆ ಎಂದು ಹೇಳಿದರೆ ತಪ್ಪಾಗಲಾರದು.

## ಹತ್ತಿ ಗಿರಣಿಯ ಕಾರ್ಮಿಕ ಚಳವಳಿ

ಹಟ್ಟಿ ಚಿನ್ನದ ಗಣಿ ಕಾರ್ಮಿಕ ಚಳವಳಿಯಂತೆ ರಾಯಚೂರು ಪ್ರದೇಶದ ಹತ್ತಿ ಗಿರಣಿಯ ಕಾರ್ಮಿಕ ಚಳವಳಿಯು ಅತ್ಯಂತ ಪ್ರಮುಖವಾದವು. ಈ ಚಳವಳಿಯಲ್ಲಿ ಮಹಿಳೆಯರು ಕೂಡ ಭಾಗವಹಿಸಿರುವುದು ವಿಶೇಷವಾಗಿದೆ. ಪುರುಷೋತ್ತಮ ಕಲಾಲಬಂಡಿ ಅವರ ನೇತೃತ್ವದಲ್ಲಿ ಈ ಹತ್ತಿ ಗಿರಣಿ ಕಾರ್ಮಿಕ ಸಂಘವು ಹುಟ್ಟಿಕೊಂಡಿತು. ಇದು ಕಾರ್ಮಿಕರ ಹಿತಾಸಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ರಾಯಚೂರು ಪ್ರದೇಶದಲ್ಲಿ ಚಳವಳಿ ಆರಂಭಿಸಿತು.

ರಾಯಚೂರು ಪ್ರದೇಶದಲ್ಲಿ ನಡೆದ ಪ್ರಮುಖ ಚಳವಳಿ ಎಂದರೆ ಹತ್ತಿ ಗಿರಣಿಯ ಕಾರ್ಮಿಕ ಚಳವಳಿ. ಈ ಚಳವಳಿಯು ರಾಯಚೂರು ಪ್ರದೇಶದಲ್ಲಿ ತನ್ನದೇ ಆದ ಪರಿಣಾಮ ಬೀರಿದ ಚಳವಳಿಯಾಗಿದೆ. ಏಕೆಂದರೆ ಬಂಡವಾಳಶಾಹಿಗಳ ನಿರ್ಲಕ್ಷತನದಿಂದ ಇಂದೂ ರಾಯಚೂರಿನಲ್ಲಿ ಹತ್ತಿ ಗಿರಣಿ ಬಂದಾಗಿದೆ. ಏಕೆಂದರೆ ಇದಕ್ಕಿಂತ ಪೂರ್ವದಲ್ಲಿ ಈ ಹತ್ತಿ ಗಿರಣಿಯು ಉತ್ತಮವಾದ ಕಾರ್ಯ ನಿರ್ವಹಿಸುತ್ತಿತ್ತು. ಹಲವಾರು ಜನರಿಗೆ ಕೆಲಸ ನೀಡಿತ್ತು. ಈ ಹತ್ತಿಗಿರಣಿಯಿಂದ ರಾಯಚೂರು ಪ್ರದೇಶಕ್ಕೆ ಒಳ್ಳೆಯ ಹೆಸರು ಬಂದಿತ್ತು.

ರಾಯಚೂರು ಪ್ರದೇಶದಲ್ಲಿ ೧೯೭೭ರಲ್ಲಿ ಕಾರ್ಮಿಕ ಸಂಘಟನೆಯು ರೈತರು ಮತ್ತು ಕೂಲಿಕಾರ್ಮಿಕರ ಜೊತೆಗೆ ರಿಕ್ಷಾ, ಲಾರಿ ಡ್ರೈವರ್ ಮುಂತಾದವರ ಬಗ್ಗೆ ಕಾಳಜಿ ವಹಿಸಿಕೊಂಡಿದೆ. ಇವರು ಕಾರ್ಮಿಕರ ಸಂಘಟನೆ ಮುಖಾಂತರ ತಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಂಡಿದ್ದಾರೆ (ಸಂದರ್ಶನ : ಪುರುಷೋತ್ತಮ ಕಲಾಲಬಂಡಿ, ೦೧.೦೩.೨೦೦೭).[೮]

ರಾಯಚೂರು ಪ್ರದೇಶದ ಹತ್ತಿಗಿರಣಿಯು ಸುಮಾರು ೧೦೦೦ ಜನರಿಗೆ ಕೆಲಸ ನೀಡಿದೆ. ಇಲ್ಲಿ ಕಾರ್ಮಿಕರ ಜೀವನ ಉದ್ಧಾರಕ್ಕಾಗಿ ಅಥವಾ ಅಭಿವೃದ್ಧಿಗಾಗಿ ಈ ಹತ್ತಿಗಿರಣಿ ಇತ್ತು. ಈ ಹತ್ತಿಗಿರಣಿಯಲ್ಲಿ ಕೆಳವರ್ಗದವರಾದ ಬಡವರು, ದೀನದಲಿತರು, ಮಹಿಳೆಯರು ಮತ್ತು ಮಕ್ಕಳು ಕೂಡ ದುಡಿದಿದ್ದಾರೆ. ಇಲ್ಲಿ ಸರಿಯಾದ ವೇತನ ನೀಡದ ಕಾರಣ ರಾಯಚೂರು ಪ್ರದೇಶದಲ್ಲಿ ಚಳವಳಿ ಹುಟ್ಟಿಕೊಂಡಿದೆ (ಸಂದರ್ಶನ : ಪುರುಷೋತ್ತಮ ಕಲಾಲಬಂಡಿ, ೦೧.೦೩.೨೦೦೭).

ರಾಯಚೂರು ಪ್ರದೇಶದ ಕಾರ್ಮಿಕರ ಚಳವಳಿಯ ನಾಯಕತ್ವವನ್ನು ವಹಿಸಿದರು. ಪುರುಷೋತ್ತಮ ಕಲಾಲಬಂಡಿ, ರಾಘವೇಂದ್ರ ಕುಷ್ಟಗಿ, ಚಂದ್ರಶೇಖರ ಬಾಳೆ, ಇನ್ನೂ ಮುಂತಾದವರು. ರಾಯಚೂರು ಪ್ರದೇಶದ ಈ ಚಳವಳಿಯಲ್ಲಿ ಕಾರ್ಮಿಕರಿಗೆ ಸರಿಯಾದ ಕೂಲಿ ಕೊಡುತ್ತಿರಲಿಲ್ಲ. ಕಾರ್ಮಿಕರ ಬಗ್ಗೆ ಸರಿಯಾದ ಕಾಳಜಿ ವಹಿಸುತ್ತಿರಲಿಲ್ಲ. ಮತ್ತು ಕಚ್ಚಾವಸ್ತುಗಳಿಂದ ತಯಾರಾದ ಈ ಹತ್ತಿ ಗಿರಣಿಯ ಲಾಭವನ್ನು ಮಾಲೀಕರು ಪಡೆಯುತ್ತಿದ್ದರು. ಇದರಲ್ಲಿ ಯಾವುದೇ ಒಂದು ಭಾಗವನ್ನು ಕಾರ್ಮಿಕರಿಗೆ ಹಂಚುತ್ತಿರಲಿಲ್ಲ.

ಇಂತಹ ಸಮಸ್ಯೆಗಳ ವಿರುದ್ಧ ಹೋರಾಟಗಳು ನಡೆದಿವೆ. ಇಲ್ಲಿ ಬಂಡವಾಳಶಾಹಿಗಳು ಕಾರ್ಮಿಕರ ಸಮಸ್ಯೆಗೆ ಸ್ಪಂದಿಸುತ್ತಿರಲಿಲ್ಲ. ಇಂತಹ ಸಂದರ್ಭದಲ್ಲಿ ಉಗ್ರವಾಗಿ ಹೋರಾಟ ನಡೆದಾಗ ಮಾತ್ರ ಕಾರ್ಮಿಕರ ಸಮಸ್ಯೆಗಳಿಗೆ ಸ್ಪಂದಿಸಿ ಪರಿಹಾರ ನೀಡಿದ್ದಾರೆ (ಸಂದರ್ಶನ : ರಾಘವೇಂದ್ರ ಕುಷ್ಟಗಿ, ೨೮.೦೨.೨೦೦೭).[೯]

ಹಳೆಯ ಯಂತ್ರೋಪಕರಣಗಳು, ಕಾರ್ಮಿಕರಿಗೆ ವೇತನ ಕಡಿಮೆ, ಬಂಡವಾಳದ ಕೊರತೆ, ಕಚ್ಚಾ ಹತ್ತಿಯ ಪೂರೈಕೆಯಲ್ಲಿ ವ್ಯತ್ಯಯ, ಮಾಲೀಕರ ದೌರ್ಬಲ್ಯ ಇನ್ನು ಮುಂತಾದ ಕಾರಣದಿಂದ ರಾಯಚೂರು ಪ್ರದೇಶದಲ್ಲಿ ಹತ್ತಿ ಗಿರಣಿಯನ್ನು ಮುಚ್ಚಲಾಯಿತು. ಇದರ ಪರಿಣಾಮವಾಗಿ ಹಲವಾರು ಕಾರ್ಮಿಕರು ಬೀದಿಗಿಳಿದರು. ಅವರಿಗೆ ಜೀವನದಲ್ಲಿ ನೆಲೆ ನಿಲ್ಲಲು ಬಹಳ ಕಷ್ಟವಾಯಿತು. ಮಾಲೀಕರು ಮತ್ತು ರಾಜಕಾರಣದ ಕಾರಣ ಈ ಹತ್ತಿಗಿರಣಿಯನ್ನು ಮುಚ್ಚಲಾಯಿತು.

ಈ ಮೇಲಿನ ಅಂಶವನ್ನು ಗಮನಿಸಿದಾಗ ರಾಯಚೂರು ಪ್ರದೇಶದಲ್ಲಿ ಕಾರ್ಮಿಕರ ಸಂಘಟನೆಯನ್ನು ಕಾಣಬಹುದು. ಬಡವರು, ಶೋಷಿತರು, ದಲಿತರು ಆಗಿದ್ದರು. ಎಲ್ಲ ಕಾರ್ಮಿಕರಂತೆ ಇವರ ಜೀವನವು ಕೂಡ ಉಜ್ವಲವಾಗದೇ ಕೆಟ್ಟ ಕನಸಾಯಿತು. ಈ ಕಾರ್ಮಿಕರ ಸ್ಥಿತಿಗತಿ ಇಂದೂ ಕಷ್ಟಕರವಾಗಿದೆ. ಒಟ್ಟಿನಲ್ಲಿ ರಾಯಚೂರು ಪ್ರದೇಶದ ಕಾರ್ಮಿಕ ಚಳವಳಿಯು ಸಮಾಜದ ಮೇಲೆ ಪ್ರಭಾವ ಬೀರಿದೆ ಎಂದು ಹೇಳಬಹುದು.

ಟಿಪ್ಪಣಿಗಳು

೧. ಸಮಾಜದ ಕಟ್ಟಕಡೆಯ ಮನುಷ್ಯ ಕೂಡ ನೆಮ್ಮದಿಯಿಂದ ಬದುಕಬೇಕೆನ್ನುವುದು ಪ್ರಜಾಪ್ರಭುತ್ವದ ಆಶಯ. ಆದರೆ ಜಾರಿಯಲ್ಲಿರುವ ವ್ಯವಸ್ಥೆ ಜಾತಿ, ಪ್ರದೇಶ, ಬಡತನ, ಧರ್ಮ ಇತ್ಯಾದಿಗಳ ಆಧಾರದ ಮೇಲೆ ಹರಿಡಿ ಹಂಚಿ ಹೋಗಿದ್ದು ದುರ್ಬಲ ಸಮುದಾಯಗಳು ನಿರಾತಂಕವಾಗಿ ಬದುಕುವುದಕ್ಕೆ ಅಡ್ಡಿಯಾಗಿವೆ. ಇದು ವಾಸ್ತವ (ವೆಂಕಟೇಶ್ ಮತ್ತು ಸರೋಜ, ೨೦೦೬: ೧೨೭).

೨. ಸಾಮಾಜಿಕ ಪ್ರಗತಿಪರ ಚಳವಳಿಯಲ್ಲಿ ಗುರುತಿಸಿಕೊಂಡವರಲ್ಲಿ ಒಬ್ಬರು. ರಾಯಚೂರು ಪ್ರದೇಶದ ಹಲವು ಬಗೆಯ ಚಳವಳಿಯನ್ನು ಕಂಡಿದೆ. ಸಾಮಾಜಿಕ ಅನಿಷ್ಟಪದ್ಧತಿಗಳು ಅನ್ಯಾಯದ ವಿರುದ್ಧ ಜನಸಾಮಾನ್ಯರ ಪರವಾಗಿ ಹೋರಾಟ ಮಾಡಿದ ಬಹುತೇಕ ವ್ಯಕ್ತಿಗಳಲ್ಲಿ ಸಿ.ದಾನಪ್ಪ ಕೂಡ ಒಬ್ಬರು. ಇಂದಿಗೂ ಕೂಡ ಆರ್ಥಿಕ ಹಿನ್ನೆಲೆಯಲ್ಲಿ ಬಹುತೇಕ ಸಮಸ್ಯೆಗಳು ಕೆಳಜಾತಿ ಅಥವಾ ಜನಾಂಗಗಳಿಗೆ ಭಾದಿಸುತ್ತಿವೆ. ಅವುಗಳನ್ನು ಹತ್ತಿಕ್ಕುವಲ್ಲಿ ಮೇಲ್ವರ್ಗಗಳ ಕುತಂತ್ರ ನೀತಿಯಿಂದ ಪಾಠ ಕಲಿಯುವಲ್ಲಿ ಕೆಳಜಾತಿಗಳ ಹೋರಾಟಗಾರರು ಹಿನ್ನಡೆ ಅನುಭವಿಸುತ್ತಿದ್ದಾರೆ. ಆದರೂ ಸಹ ಬಹುತೇಕ ಹೋರಾಟಗಳು ದಲಿತರ ಪರವಾಗಿ, ಜನಸಾಮಾನ್ಯರ ಪರವಾಗಿ ಸಿ.ದಾನಪ್ಪ ಅವರು ಮಾಡಿದ್ದಾರೆ (ಹೆಚ್ಚಿನ ವಿವರಗಳಿಗೆ ಅನುಬಂಧವನ್ನು ನೋಡಿ, ಪು.೧೦೯).

೩. ರಾಯಚೂರು ಜಿಲ್ಲೆಯ ರೈತ ಹೋರಾಟಗಳಲ್ಲಿ ಮಲ್ಲಯ್ಯ ಜಾಲಹಳ್ಳಿ ಒಬ್ಬರು. ಪ್ರಾಕೃತಿಕ ವಿಕೋಪಗಳಿಂದ ತತ್ತರಿಸಿದ ರಾಯಚೂರು ಪ್ರದೇಶವು ಪ್ರಗತಿಪರವಾಗಿ ಮತ್ತು ಅಭಿವೃದ್ಧಿಯ ಪಥದತ್ತ ಮುನ್ನುಗಲು ಇವರು ಕಾರಣಕರ್ತರಾಗಿದ್ದಾರೆ. ಇವರ ಬಹುತೇಕ ಧೋರಣೆಗಳು ರೈತರ ಪರವಾಗಿ ಕಾರ್ಯರೂಪಕ್ಕೆ ಬರುತ್ತಿವೆ (ಹೆಚ್ಚಿನ ವಿವರಗಳಿಗೆ ಅನುಬಂಧವನ್ನು ನೋಡಿ, ಪು.೧೧೩).

೪. ರಾಯಚೂರು ಪ್ರದೇಶದ ಮಾದಿಗ ಮೀಸಲಾತಿ ಹೋರಾಟ ಚಳುವಳಿಯಲ್ಲಿ ಗುರುತಿಸಿಕೊಂಡವರಲ್ಲಿ ಜೆ.ಬಿ.ರಾಜು ಒಬ್ಬರು. ಸರ್ಕಾರದಿಂದ ಮಂಜೂರಾತಿಯಾಗಿರುವ ಸೌಲಭ್ಯಗಳು ಮುಖ್ಯವಾಗಿ ಮಾದಿಗ ಸಮುದಾಯಕ್ಕೆ ಸಲ್ಲಬೇಕೆಂದು ಹೋರಾಟ ಮಾಡುತ್ತಿದ್ದಾರೆ. ಜೊತೆಗೆ ಆಂಧ್ರದ ಮಾದರಿಯಂತೆ ಪ್ರತ್ಯೇಕ ಮೀಸಲಾತಿ ಕೊಡಬೇಕೆಂದು ಒತ್ತಾಯಿಸುತ್ತಿದ್ದಾರೆ(ಹೆಚ್ಚಿನ ವಿವರಗಳಿಗೆ ಅನುಬಂಧವನ್ನು ನೋಡಿ, ಪು.೧೧೦).

೫. ರಾಯಚೂರು ಪ್ರದೇಶದ ಕೃಷಿ ಚಟುವಟಿಕೆಗಳು ಚುರುಕುಗೊಳ್ಳಲು ಹಾಗೂ ಆ ಪ್ರದೇಶದಲ್ಲಿ ನೀರಾವರಿ ಸೌಲಭ್ಯವನ್ನು ವಿಸ್ತರಿಸುವಲ್ಲಿ ಚಂದ್ರಶೇಖರ ಬಾಳೆ ಅವರ ಪಾತ್ರ ಪ್ರಮುಖವಾದದ್ದು. ಜಿಲ್ಲೆಗೆ ನೀರಾವರಿ ಕಾಲುವೆಗಳು ಕಾಣಿಸಿಕೊಳ್ಳಲು ಇವರು ಕೂಡ ಕಾರಣೀಭೂತರಾಗಿದ್ದಾರೆ. ಆ ಮುಖಾಂತರ ರೈತರ ಸಮಸ್ಯೆಗಳಿಗೆ ಸ್ಪಂದಿಸುತ್ತ ರೈತ ಹೋರಾಟಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ(ಹೆಚ್ಚಿನ ವಿವರಗಳಿಗೆ ಅನುಬಂಧವನ್ನು ನೋಡಿ, ಪು.೧೧೩).

೬. ಶ್ರಮಿಕ ಎಂಬುವನು ವಸ್ತುಗಳ ಉತ್ಪಾದಕನು ಹಾಗೂ ಉಪಯೋಗಿಯೂ ಹೌದು. ಹೀಗಾಗಿ ಉತ್ಪಾದನಾ ವ್ಯವಸ್ಥೆಯ ಅಳಿವು, ಉಳಿವು ಶ್ರಮವನ್ನೇ ಅವಲಂಬಿಸಿದಿದೆ. ಆದ್ದರಿಂದ ಖ್ಯಾತ ಅರ್ಥಶಾಸ್ತ್ರಜ್ಞರಾದ ಜೆ.ಎಂ.ಕೇನ್ಸ್‌ರ್ ಪ್ರಕಾರ "ಶ್ರಮಿಕರನ್ನು ಉತ್ಪಾದನ ವ್ಯವಸ್ಥೆಯ ರಾಜ"ನೆಂತಲೂ ಹೇಳಿದ್ದಾರೆ. ಕಾರ್ಲ್‌ಮಾರ್ಕ್ಸ್‌ರ ಪ್ರಕಾರ 'ಶ್ರಮವು ಉತ್ಪಾದನಾ ವ್ಯವಸ್ಥೆಯ ಮತ್ತು ರಾಷ್ಟ್ರದ ಬೆಳವಣಿಗೆಯ ಬೆನ್ನೆಲುಬು

ಎಂದಿದ್ದಾರೆ. ಹೀಗಾಗಿ ಆರ್ಥಿಕ ವ್ಯವಸ್ಥೆಯಲ್ಲಿ 'ಶ್ರಮ' ಎಂಬ ಪದವನ್ನು ಕಾರ್ಮಿಕ, ಕೂಲಿ, ನೌಕರ, ಆಳು, ಕೆಲಸಗಾರ, ಮಾಲಿ ಮುಂತಾದ ನಾಮಪದಗಳಿಂದ ಗುರುತಿಸುವ ಮೂಲಕ ವಿಶಾಲ ಅರ್ಥದಲ್ಲಿ ಬಳಸಲಾಗುತ್ತದೆ (ಸುಂಕನೂರು, ೨೦೦೬ : ೪೩).

೭. ಹಟ್ಟಿ ಚಿನ್ನದ ಗಣಿಯ ಕಾರ್ಮಿಕರನ್ನು ಗಮನದಲ್ಲಿಟ್ಟುಕೊಂಡು ದುಡಿಯುತ್ತಿರುವ ಕಾರ್ಮಿಕ ನಾಯಕರಲ್ಲಿ ಮಹಮದ್ ಮೌಲಾ ಒಬ್ಬರು. ಸರ್ಕಾರದಿಂದ ಸಿಗಬೇಕಾದ ಸವಲತ್ತುಗಳು ಕಾರ್ಮಿಕರಿಗೆ ಸಿಗುತ್ತಿಲ್ಲ ಎಂದು ಹೋರಾಟ ಮಾಡುತ್ತಿದ್ದಾರೆ. ಆ ಪ್ರದೇಶಗಳಲ್ಲಿ ಕಾಡುತ್ತಿರುವ ಸಾಮಾಜಿಕ ಸಮಸ್ಯೆಗಳ ಕುರಿತು ಚರ್ಚಿಸುವುದರ ಜೊತೆಗೆ ಹೋರಾಟದಲ್ಲಿ ತೊಡಗಿಸಿಕೊಂಡಿದ್ದಾರೆ(ಹೆಚ್ಚಿನ ವಿವರಗಳಿಗೆ ಅನುಬಂಧವನ್ನು ನೋಡಿ, ಪು.೧೧೦).

೮. ಸಮಾಜದಲ್ಲಿ ಸಾಂಸ್ಕೃತಿಕ ವೈರುಧ್ಯಗಳಿಗೆ ಆರ್ಥಿಕ ಪರಿಸ್ಥಿತಿ ಕೂಡ ಪ್ರಮುಖ ಕಾರಣಗಳಲ್ಲಿ ಒಂದು. ಈ ಹಿನ್ನೆಲೆಯಲ್ಲಿ ಪುರುಷೋತ್ತಮ ಕಲಾಲಬಂಡಿಯವರು ಸಮಾಜದ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸುತ್ತಿರುವವರಲ್ಲಿ ಇವರೂ ಒಬ್ಬರು. ರಾಯಚೂರು ಪ್ರದೇಶದ ಬಹುತೇಕ ಕಾರ್ಮಿಕರ ಹೋರಾಟಗಳಲ್ಲಿ ಗುರುತಿಸಿಕೊಂಡಿದ್ದಾರೆ. ಆ ಪ್ರದೇಶದ ಬಹುತೇಕ ಕಾರ್ಮಿಕ ಸಮಸ್ಯೆಗಳನ್ನು ವಾಸ್ತವಿಕ ನೆಲೆಗಟ್ಟಿನಲ್ಲಿ ಮನದಟ್ಟು ಮಾಡಿಕೊಡುವವರಲ್ಲಿ ಇವರು ಒಬ್ಬರು (ಹೆಚ್ಚಿನ ವಿವರಗಳಿಗೆ ಅನುಬಂಧವನ್ನು ನೋಡಿ, ಪು.೧೧೩).

೯. ರಾಘವೇಂದ್ರ ಕುಷ್ಟಗಿಯವರು ರಾಯಚೂರು ಪ್ರದೇಶದ ಹಿಂದುಳಿದ ಜನತೆಯ ನಾಯಕ ಎಂದು ಗುರುತಿಸಿಕೊಂಡಿದ್ದಾರೆ. ಇವರು ಕಾರ್ಮಿಕರ ಪರವಾಗಿ ಜನಸಮುದಾಯದೊಂದಿಗೆ ಪ್ರಗತಿಪರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸುತ್ತಿದ್ದಾರೆ (ಹೆಚ್ಚಿನ ವಿವರಗಳಿಗೆ ಅನುಬಂಧವನ್ನು ನೋಡಿ, ಪು.೧೧೧).

ಸಮಾಜದ ಮೇಲೆ ಪ್ರಭಾವ ಬೀರುವ ಬಹುತೇಕ ಪ್ರೇರಕ ಅಂಶಗಳ ಭೌತಿಕ ಚಟುವಟಿಕೆಗಳು ಪ್ರಮುಖವಾದವು. ಸಾಮಾಜಿಕ ಅರಿವು, ಜಾಗೃತಿ ಮುಂತಾದ ಅಂಶಗಳು ಚಳವಳಿಗಳ ಮುಖಾಂತರ, ಭೌತಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದರ ಮೂಲಕ ಪಡೆಯಬಹುದು. ಸಮಾಜದ ಎಲ್ಲ ವರ್ಗದವರು ಅಕ್ಷರ ಅರಿವು ಪಡೆಯುವುದರ ಮೂಲಕ ಸಾಮಾಜಿಕ ಆಂದೋಲನವನ್ನು, ಬದಲಾವಣೆಯನ್ನು ಸಕಾರಾತ್ಮಕ ಪ್ರಕ್ರಿಯೆಯನ್ನು ತೆಗೆದುಕೊಂಡಲ್ಲಿ ಸಹಾಯಕವಾಗುತ್ತದೆ. ಅವುಗಳಿಗೆ ಬಹುತೇಕ ಸಮುದಾಯಗಳು ಪೂರಕವಾಗಿ ಶ್ರಮಿಸಿದಾಗ ಮಾತ್ರ ಯಶಸ್ವಿಯಾಗುತ್ತದೆ. ಈ ಬಗೆಯ ಯೋಜನೆಗಳು ಯಶಸ್ವಿಯಾಗಲು ಕೇವಲ ಜನಸಮುದಾಯಗಳ ಶ್ರಮ ಮಾತ್ರ ಸಾಕಾಗಲಾರದು. ಅದಕ್ಕೆ ಸರಕಾರ ಮತ್ತು ಸರ್ಕಾರೇತರ ಸಮಸ್ಯೆಗಳ ಸಹಾಯವು ಅಗತ್ಯವಾಗುತ್ತದೆ. ಸಾಕ್ಷರತಾ ಚಳವಳಿ, ಸಮುದಾಯ ಚಳವಳಿ, ಸಮೂಹ ಚಳವಳಿ ಪ್ರಮುಖವಾದವು. ಇವುಗಳನ್ನು ಈ ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸುವ ಪ್ರಯತ್ನವನ್ನು ಮಾಡಲಾಗಿದೆ.

## ಸಾಕ್ಷರತಾ ಚಳವಳಿ

ಇದು ಸರ್ಕಾರವು ರೂಪಿಸಿರುವ ಚಳವಳಿಯಾಗಿವೆ. ಒಂದು ಕಾಲಕ್ಕೆ ಕೇವಲ ಕೆಲವರಿಗೆ ಮಾತ್ರ ಮೀಸಲಾಗಿದ್ದ ಶಿಕ್ಷಣ ಇಂದು ಎಲ್ಲರ ಸ್ವತ್ತು ಎಂಬ ಭಾವನೆ ಬೆಳೆಯುತ್ತಿದೆ. ವಿಶ್ವಸಂಸ್ಥೆಯ ೨೬ನೇ ಪ್ರಣಾಳಿಕೆಯು ಪ್ರಕಾರ 'ಓದು ಬರಹ ಕಲಿಯುವುದು ಪ್ರತಿಯೊಬ್ಬನ 'ಆಜನ್ಮಸಿದ್ದ ಹಕ್ಕು' ಎಂಬ ಈ ಹೇಳಿಕೆಯಲ್ಲಿ ಎಳೆಯ ವಯಸ್ಸಿನಲ್ಲಿ ಯಾವುದೇ ಔಪಚಾರಿಕ ಶಿಕ್ಷಣ ಪಡೆಯಲಾರದ ವಯಸ್ಕರು ಸಹ ಓದುಬರಹ ಕುರಿತು, ರೂಢಿಸಿಕೊಂಡು ಸುಶಿಕ್ಷಿತರಾಗಲು ಸರಕಾರ ಹಾಗೂ ಉನ್ನತ ಶಿಕ್ಷಣ ಸಂಸ್ಥೆಗಳು ಅವಕಾಶ ಕಲ್ಪಿಸುತ್ತಿವೆ. ನಮ್ಮ ದೇಶ ಎದುರಿಸುತ್ತಿರುವ ಸಮಸ್ಯೆಗಳಲ್ಲಿ ಪ್ರಥಮ ಪಂಕ್ತಿಗೆ ಸೇರಿದ್ದು 'ಅನಕ್ಷರತೆ' ಇದರೊಂದಿಗೆ ಬಡತನ, ನಿರುದ್ಯೋಗ, ಅಜ್ಞಾನ, ಅಸಮಾನತೆ, ಮೂಡನಂಬಿಕೆಗೆ ಇದು ಪೂರಕವಾದುದು. ಪ್ರಜಾ ಸರಕಾರ ರೂಪಿಸುವ ಎಲ್ಲ ಅಭಿವೃದ್ಧಿ ಯೋಜನೆಗಳ ವೈಫಲ್ಯಕ್ಕೆ ಇದು ಸಹಾಯಕವಾಗಿದೆ. ಶೋಷಣೆ, ದಬ್ಬಾಳಿಕೆಗಳಿಗೆ ದಾರಿ, ಇದು ರಾಷ್ಟ್ರಾಭಿವೃದ್ಧಿಗೂ ಪೂರಕವಾಗಿದೆ. ಇವುಗಳ ನಿರ್ಮೂಲನಕ್ಕೆ ಹಲವು ಪ್ರಯತ್ನಗಳಲ್ಲೊಂದು 'ಸಾಕ್ಷರತಾ ಆಂದೋಲನಾ'. ಜಗತ್ತಿನ ಭೂಪಟದಲ್ಲಿ ಅನಕ್ಷರಸ್ಥರಿರುವ ಸ್ಥಳವನ್ನು ಕಪ್ಪು ಬಣ್ಣದಿಂದ ಗುರುತಿಸಿದರೆ ಭಾರತವು ಒಂದು ಕಪ್ಪು ಖಂಡದಂತೆ ಗೋಚರಿಸುತ್ತದೆ ಎನ್ನುವ ಮಾತುಗಳು ಸಾಮಾಜಿಕ ಅಗತ್ಯತೆಯಾಗಿರುವ ಶಿಕ್ಷಣದ ದುಃಸ್ಥಿತಿಯನ್ನು ಸೂಚಿಸುತ್ತದೆ (ವೆಂಕಟೇಶ್ ಮತ್ತು ಸರೋಜ, ೨೦೦೬: ೩೩). ಭಾರತದಲ್ಲಿ ಅತಿ ಹೆಚ್ಚಾಗಿ ಗ್ರಾಮೀಣ ಪ್ರದೇಶದಲ್ಲಿ ಜನರು ವಾಸಿಸುತ್ತಿದ್ದಾರೆ. ಸಾಕ್ಷರತೆಗಿಂತ ಅನಕ್ಷರತೆ ಹೆಚ್ಚು ಇದೆ. ಆದುದರಿಂದ

ನಮ್ಮ ದೇಶದಲ್ಲಿ ಸಾಕ್ಷರತೆ ಪ್ರೇರಣೆಗಾಗಿ ಯೋಜನೆಗಳನ್ನು ಹಾಕಿಕೊಂಡಿದ್ದಾರೆ. ಅದರಂತೆ ರಾಯಚೂರು ತೀರ ಹಿಂದುಳಿದ ಪ್ರದೇಶವಾದ್ದರಿಂದ ಇಲ್ಲಿ ಸಾಕ್ಷರತೆ ಅತ್ಯವಶ್ಯಕವಾಗಿದ್ದು, ಅನಕ್ಷರತೆಯನ್ನು ತೊಲಗಿಸಲು ಮೊಟ್ಟಮೊದಲು ಸಾಕ್ಷರತಾ ಕಾರ್ಯಕ್ರಮ, ನಿರಂತರ ಶಿಕ್ಷಣ ಕಾರ್ಯಕ್ರಮ, ವಯಸ್ಕರ ಶಿಕ್ಷಣ ಪಡೆ, ಏಡ್ಸ್ ಜಾಗೃತಿ ಕಾರ್ಯಕ್ರಮ, ವಿದ್ಯಾರ್ಥಿಗಳ ಮೂಲಕ ಸಾಕ್ಷರತೆ, ತರಬೇತಿ ಕಾರ್ಯಕ್ರಮ ಮತ್ತು ಉದ್ಯೋಗ ಖಾತ್ರಿ ಈ ಯೋಜನೆಗಳನ್ನು ಈ ಕೆಳಗಿನಂತೆ ಅಧ್ಯಯನ ಮಾಡಲಾಗಿದೆ.

## ಮೊಟ್ಟ ಮೊದಲ ಸಾಕ್ಷರತಾ ಕಾರ್ಯಕ್ರಮ

ಈ ಶತಮಾನದ ಆದಿಯಲ್ಲಿ ಕರ್ನಾಟಕದಲ್ಲಿ ಸಾಕ್ಷರತಾ ಕಾರ್ಯಕ್ರಮದ ಕಲ್ಪನೆಗೆ ಬುನಾದಿ ಹಾಕಿದ್ದು ಸರ್.ಎಂ.ವಿಶ್ವೇಶ್ವರಯ್ಯನವರು ೧೯೧೨ರಲ್ಲಿ. ಅವರು ಅನಕ್ಷರಸ್ಥ ವಯಸ್ಕರಿಗೆ ಅಕ್ಷರ ಕಲಿಸಬೇಕೆಂಬ ಬಯಕೆಯನ್ನು ಹೊಂದಿದ್ದರು. ಅದಕ್ಕಾಗಿ ಅವರು ಆ ಕಾಲದಲ್ಲಿ ಸುಮಾರು ೫ರಿಂದ ೭ ಸಾವಿರದಷ್ಟು ವಯಸ್ಕರ ರಾತ್ರಿ ಶಾಲೆಗಳನ್ನು ಪ್ರಾರಂಭ ಮಾಡುವ ದಿಟ್ಟ ಹೆಜ್ಜೆ ಇಟ್ಟು ಯಸಸ್ವಿ ಕೂಡ ಆಗಿದ್ದರು. ಇಂತಹ ಯಶಸ್ವಿನ ಯೋಜನೆ ಕರ್ನಾಟಕದಲ್ಲಿ ಹಬ್ಬಿದಾಗ ಸಾಕ್ಷರತೆ ಕೂಡ ರಾಯಚೂರು ಪ್ರದೇಶದಲ್ಲಿ ಹುಟ್ಟಿಕೊಂಡಿತು.

ಸಾಕ್ಷರತೆ ಮಾನವ ಬಂಡವಾಳವನ್ನು ಅಭಿವೃದ್ಧಿಪಡಿಸುವ ಸಾಧನ. ಸಾಕ್ಷರತೆಯು ಜನರನ್ನು ಸುಶಿಕ್ಷಿತರನ್ನಾಗಿಸುವ ಮೂಲಕ ಅವರ ಉತ್ಪಾದನೆ, ಅವರ ಕುಶಲತೆ, ಆರ್ಥಿಕತೆಯನ್ನು ಸಮಾಜದಲ್ಲಿ ಉತ್ತಮವಾಗಿ ರೂಪಿಸುತ್ತದೆ. ಸಾಕ್ಷರತೆಯು ಆಧುನಿಕ ಕೈಗಾರೀಕೀಕರಣ ಪ್ರಕ್ರಿಯೆಗಳ ಸಾಮಾಜೀಕರಣವನ್ನು ಹೇಳಿಕೊಡುವ ಪ್ರಮುಖ ಸಾಧನವೆಂದೂ ಹೇಳಲಾಗುತ್ತದೆ (ಪ್ರಶಾಂತ್, ೨೦೦೫ : ೪೯).

ಸಾಕ್ಷರತೆ ಇಲ್ಲದಿದ್ದಲ್ಲಿ ಅದರ ಸ್ಥಿತಿಯು ಬಡತನವೆಂದು ನಿರ್ವಚಿಸಿದ್ದಾರೆ. ಇಂದು ಅನಕ್ಷರಸ್ಥರ ಸಂಖ್ಯೆ ಹೆಚ್ಚು ಇರುವ ಪ್ರದೇಶದಲ್ಲಿ ಮನುಷ್ಯನಿಗೆ ಬದುಕುವ ಅವಕಾಶಗಳು ಸಹ ಕಡಿಮೆ ಇರುತ್ತವೆ. ಅಲ್ಲಿ ಬಡತನವು ತೀವ್ರವಾಗಿ ಇರುತ್ತದೆ. "ಸಾಕ್ಷರತೆಯು ಜನರಿಗೆ ಸ್ವಾತಂತ್ರ್ಯವನ್ನು, ಬದುಕುವ ಅವಕಾಶಗಳನ್ನು ಒದಗಿಸುವ ಒಂದು ಗುಣವಾಗಿದೆ. ಇಂದು ಸಾಕ್ಷರತೆಯು ಒಂದು ಪ್ರಮುಖ ಗುಣವು ಹೌದು, ಒಂದು ಶಕ್ತಿಯೂ ಹೌದು ಎಂದು ಅಮರ್ತ್ಯಸೇನ್ ವಾದಿಸುತ್ತಾರೆ (ಪ್ರಶಾಂತ್, ೨೦೦೫ : ೪೯).

ರಾಯಚೂರು ಪ್ರದೇಶದ (ಗ್ರಾಮೀಣ ಮತ್ತು ನಗರ ಪ್ರದೇಶದ ಸಾಕ್ಷರತೆ)

| | ಪುರುಷರು | ಮಹಿಳೆಯರು | ಒಟ್ಟು |
|---|---|---|---|
| ರಾಯಚೂರು | ೬೨.೦೨ | ೩೬.೮೪ | ೪೯.೫೪ |
| ಗ್ರಾಮೀಣ | ೫೬.೮೭ | ೨೯.೩೮ | ೪೩.೧೫ |
| ನಗರ | ೭೬.೨೯ | ೫೮.೫ | ೬೭.೬೩ |

ಮೂಲ : ಸೆನ್ಸಸ್ ೨೦೦೧ ಮತ್ತು ಅಭಿವೃದ್ಧಿ ಅಧ್ಯಯನ ೨೦೦೩ (ಪ್ರಶಾಂತ್, ೨೦೦೫ : ೫೫).

ಸಾಕ್ಷರತೆ ಎಂಬುದು ಸಾಮಾಜಿಕ ಪ್ರಗತಿಗೆ ಅತ್ಯಗತ್ಯವಾದುದು. ಸರ್ಕಾರದ ನೀತಿಯಲ್ಲಿ ಪ್ರತಿಯೊಬ್ಬರು ಸಾಕ್ಷರತೆಯನ್ನು ಹೊಂದಿರಬೇಕು ಎಂಬ ಪೂರ್ಣ ಯೋಜನೆಯನ್ನು ೧೯೯೦-೧೯೯೧ರಲ್ಲಿ ಪ್ರತಿಯೊಂದು ಪ್ರದೇಶದಲ್ಲಿ ಜಾರಿಗೆ ತಂದಿತು. ಈ ಯೋಜನೆ ರಾಯಚೂರು ಪ್ರದೇಶದಲ್ಲಿ ೧೯೯೦-೧೯೯೧ರಲ್ಲಿ ಪ್ರಾರಂಭವಾಯಿತು.

ಇದಕ್ಕಿಂತ ಪೂರ್ವದಲ್ಲಿ ೧೯೩೫ರಲ್ಲಿ ಮೈಸೂರು ಮಹಾರಾಜ ಒಡೆಯರ್ ಕಾಲದಿಂದಲು ವಯಸ್ಕರ ಶಿಕ್ಷಣ ಜಾರಿಯಲ್ಲಿ ಇದೆ. ಈ ಶಿಕ್ಷಣ ೧೯೭೭ರಲ್ಲಿ (ನ್ಯಾಶನಲ್ ಲಿಟ್‌ಸಿಂಗ್ ಮಶಿನ್) ಎನ್.ಎಲ್.ಎಮ್. ಇದು ದೆಹಲಿಯಲ್ಲಿ ಪ್ರಾರಂಭವಾದಾಗ ಈ ಸಾಕ್ಷರತೆಯು ಗುಣಮಟ್ಟವು ಚುರುಕು ಮಟ್ಟಿತು ಎಂದು ಹೇಳಬಹುದು (ಸಂದರ್ಶನ : ಬಸಪ್ಪ, ೨೩-೦೨-೨೦೦೭).[1] "ಬಹುಸಂಖ್ಯಾತ ಅನಕ್ಷರತೆ ದೇಶದ ಒಂದು ಶಾಪ ಹಾಗೂ ಕಳಂಕವಾಗಿದೆ" ಮತ್ತು "ಬನ್ನಿ ಸಂಘಟಿತರಾಗಿ ಅಕ್ಷರಸ್ಥ ನಾಡೊಂದು ಕಟ್ಟೋಣ" ಎಂಬ ಎರಡು ಸ್ಟಿಕ್ಕರ್‌ಗಳನ್ನು ನಿರ್ಮಿಸಿ ಪ್ರಚಾರಪಡಿಸಲಾಯಿತು.

ಜಿಲ್ಲೆಯಲ್ಲಿ ಅನಕ್ಷರಸ್ಥರನ್ನು, ಅಕ್ಷರಸ್ಥರನ್ನಾಗಿ ಮಾಡುವ ದಿಸೆಯಲ್ಲಿ ೧೯೭೮ರಲ್ಲಿ ವಯಸ್ಕರ ಶಿಕ್ಷಣವು ಗ್ರಾಮೀಣ ಕ್ರಿಯಾತ್ಮಕ ಸಾಕ್ಷರತಾ ಕಾರ್ಯಕ್ರಮವನ್ನು ಆರಂಭಿಸಿತು. ಹಾಗೆಯೇ ಶಿಕ್ಷಣ ಇಲಾಖೆಯಲ್ಲಿ ಅಕ್ಷರಸೇನೆ ಯೋಜನೆಯನ್ನು ಹಮ್ಮಿಕೊಂಡಿದ್ದರೂ ಗಣನೀಯ ಸಾಧನೆ ಕಂಡುಬರಲಿಲ್ಲ.

ಸಾಕ್ಷರತೆಯಲ್ಲಿ ಕೇವಲ ಸಾಕ್ಷರತೆಗೆ ಒತ್ತು ನೀಡದೆ ಇದರ ಜೊತೆಗೆ ಅಕ್ಷರ ಅರಿವು, ಕ್ರಿಯಾಶೀಲತೆ ಮೂಡಿಸುವಂತದ್ದು, ಓದುಬರಹ ಜೊತೆಗೆ ಅರಿವು ಮೂಡಿಸುವುದು, ಬಡವರಿಗೆ, ವಂಚಿತರಿಗೆ ಮಹಿಳೆಯರಿಗೆ ಬಿಡುಗಡೆ ಮಾರ್ಗವೆಂದರೆ ಸಾಕ್ಷರತೆ.

ಸಾಮೂಹಿಕ ಸಾಕ್ಷರತಾ ಆಂದೋಲನ ಕರ್ನಾಟಕ ಪ್ರಯೋಗ ೧೯೮೮ರಲ್ಲಿ ಜಾರಿಗೆ ಬಂದ ನಂತರ ಜಿಲ್ಲಾ ವಯಸ್ಕರ ಶಿಕ್ಷಣಕ್ಕೆ ಹೊಸ ಹುರುಪು ಬಂತು. ವಯಸ್ಕರ ಶಿಕ್ಷಣ ನಿರ್ದೇಶನಾಲಯ ಸ್ವಯಂ ಸೇವಾ ಸಂಸ್ಥೆಗಳ ನೆರವಿನಿಂದ ಜಿಲ್ಲೆಯಲ್ಲಿ ವಯಸ್ಕರ ಶಿಕ್ಷಣ ಕಾರ್ಯಕ್ರಮಕ್ಕೆ ಆಂದೋಲನದ ಸ್ವರೂಪ ಕೊಟ್ಟು ಅನುಷ್ಠಾನ ಮಾಡಿತು. ಇದು ರಾಜ್ಯದಲ್ಲಿ ಎಲ್ಲ ಜಿಲ್ಲೆಗಳಲ್ಲಿ ಆಯ್ದ ಒಂದೊಂದು ತಾಲ್ಲೂಕನ್ನು ಆಂದೋಲನ ಪ್ರಯೋಗಕ್ಕೆ ಒಳಪಡಿಸಲಾದಂತೆ ರಾಯಚೂರು ಜಿಲ್ಲೆಯಲ್ಲಿ ದೇವದುರ್ಗ ತಾಲ್ಲೂಕನ್ನು ಆಯ್ಕೆ ಮಾಡಿಕೊಳ್ಳಲಾಯಿತು.

ಹಾಲಿ ದೇವದುರ್ಗ ೮ ಜನಶಿಕ್ಷಣ ನಿಯಮಗಳು ಆಂದೋಲನದಲ್ಲಿ ಕಲಿತ ನವಸಾಕ್ಷರರು ತಮ್ಮ ಓದನ್ನು ಮುಂದುವರಿಕೆ ಶಿಕ್ಷಣ ಕೇಂದ್ರಗಳಲ್ಲಿ ಮುಂದುವರಿಸಲು ಅನುಕೂಲವಾಗುವಂತೆ ಇನ್ನೂ ಹೆಚ್ಚುವರಿ ೭ ಜನ ಶಿಕ್ಷಣ ನಿಯಮಗಳನ್ನು ತೆಗೆಯಲು ಉದ್ದೇಶಿಸಲಾಯಿತು.

ಈ ಸಾಕ್ಷರತೆಯನ್ನು ಅಭಿವೃದ್ಧಿಪಡಿಸಲು ಅನಕ್ಷರತೆಯನ್ನು ಹೋಗಲಾಡಿಸಲು, ಜಾಥ ಮೆರವಣಿಗೆ, ಗೊಂಬೆಯಾಟ ಮತ್ತು ಜಿಲ್ಲೆಯಲ್ಲಿ ಆಂದೋಲನಕ್ಕೆ ಒಳಪಡಿಸಿದ ಎಲ್ಲ ೭ ತಾಲ್ಲೂಕುಗಳಲ್ಲಿ ಅಕ್ಷರರಥ

ಸಂಚರಿಸಿ ಸಾಕ್ಷರತೆಯ ಮಹತ್ವವನ್ನು ಸಾರಿತು. ಕಲಿಸುವ ಸ್ವಯಂಸೇವಕರಿಗೆ ಮಂಡಲ ಮಟ್ಟದಲ್ಲಿ ತರಬೇತಿಗಳು ನಡೆದು ಕಾರ್ಯಕ್ರಮ ಜಾರಿಗೊಂಡಿತು(ಜಿಲ್ಲಾ ಸಾಕ್ಷರತಾ ಸಮಿತಿ(ರಿ) ರಾಯಚೂರು, ಸಂಕ್ಷಿಪ್ತ ವರದಿ).

ರಾಯಚೂರು ಜಿಲ್ಲೆಯಲ್ಲಿ ೧೯೯೧-೯೨ರಲ್ಲಿ ಸಾಕ್ಷರತಾ ಆಂದೋಲನ ಜಾರಿಯಾಯಿತು. ಇದಕ್ಕಾಗಿ ಜಿಲ್ಲೆಯಲ್ಲಿ ಜಿಲ್ಲಾ ಸಾಕ್ಷರತಾ ಸಂಗ್ರಾಮ ಸಮಿತಿ ರಚನೆಯಾಯಿತು. ದಿನಾಂಕ ೨೮-೧-೯೧ರಂದು ಸಾಕ್ಷರತೆ ಯೋಜನೆಗೆ ಕೇಂದ್ರ ಸರ್ಕಾರದ ಅನುಮೋದನೆ ಸಿಕ್ಕಿತು. ಜಿಲ್ಲೆಯಲ್ಲಿ ಆಂದೋಲನವನ್ನು ಕೈಗೆತ್ತಿಕೊಂಡಾಗ ಇದ್ದ ಸಾಕ್ಷರತಾ ಪ್ರಮಾಣ ಹಾಗೂ ೧೯೯೧ರ ಜನಗಣತಿ ಪ್ರಕಾರ ಸಾಕ್ಷರತೆ ಶೇಕಡಾ ೩೫.೯೫ ಅದರಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ ಶೇಕಡಾ ೨೨.೧೫ ಮಾತ್ರ. ಜಿಲ್ಲೆಯ ಸಾಕ್ಷರತೆಯನ್ನು ರಾಯಚೂರು ಪ್ರದೇಶದಲ್ಲಿ ೨೦೦೧ರ ಪ್ರಕಾರ ೪೮.೦೦ ಶೇಕಡ ಅಭಿವೃದ್ಧಿ ಪಡಿಸಲಾಯಿತು (ಸಂದರ್ಶನ : ಬಸಪ್ಪ, ೨೩-೦೨-೨೦೦೭).

ಈ ಮೇಲಿನ ಎಲ್ಲ ಅಂಶಗಳನ್ನು ಗಮನಿಸಿದಾಗ ರಾಯಚೂರು ಪ್ರದೇಶದಲ್ಲಿ ಸಾಕ್ಷರತೆಯು ಸ್ವಲ್ಪಮಟ್ಟಿಗಾಯಾದರು ಉತ್ತಮಗೊಂಡಿದ್ದನ್ನು ನಾವು ಕಾಣಬಹುದು. ರಾಯಚೂರು ಪ್ರದೇಶದ ಸಾಕ್ಷರತೆಯು ೧೨.೦೦ ಶೇಕಡ ಏರಿರುವುದು ರಾಯಚೂರು ಜಿಲ್ಲೆಯಲ್ಲಿ. ಕೂಲಿಗೆ ಹೋಗುವವರನ್ನು ಸಾಕ್ಷರರನ್ನಾಗಿ ಮಾಡಿರುವುದು ಜಿಲ್ಲಾ ಸಾಕ್ಷರತಾ ಸಮಿತಿ ಸಾಧನೆಯನ್ನು ಎತ್ತಿ ತೋರಿಸುತ್ತದೆ.

ರಾಯಚೂರು ಜಿಲ್ಲೆಯಲ್ಲಿ ೧೯೯೧ರಿಂದ ೨೦೦೧ರವರೆಗೆ ಪುರುಷರು ಮತ್ತು ಮಹಿಳೆಯರ ಒಟ್ಟು ಸಾಕ್ಷರತೆಯ ಮಟ್ಟವನ್ನು ಗಮನಿಸಿದಾಗ ೧೯೯೧ರಲ್ಲಿ ಶೇಕಡಾ ೩೫.೯೫ರಷ್ಟು ಸಾಕ್ಷರತೆ ಇತ್ತು. ಈ ಸಮಿತಿಯ ಕಾರ್ಯಯೋಜನೆಗಳಿಂದ ೨೦೦೧ರವರೆಗೆ ಅನಕ್ಷರತೆಯು ಸ್ವಲ್ಪಮಟ್ಟಿಗಾದರೂ ಕಡಿಮೆಯಾದದ್ದು ಕಂಡುಬರುತ್ತದೆ. ಜೊತೆಗೆ ಸಾಕ್ಷರತೆಯ ಪ್ರಗತಿಗಾಗಿ ೨೦೦೧ರ ಮಾಹಿತಿಯ ಪ್ರಕಾರ ಶೇ.೪೮ರಷ್ಟು ಸಾಕ್ಷರತೆಯ ಪ್ರಗತಿ ಸಾಧಿಸಿರುವುದು ಕಂಡುಬರುತ್ತದೆ.

**೧೯೯೧ರಿಂದ ೨೦೦೧ರವರೆಗಿನ ಸಾಕ್ಷರತಾ ಬೆಳವಣಿಗೆ ಪ್ರಮಾಣ**

೧. ಸಾಕ್ಷರತೆ : ಪುರುಷರು - ೪,೨೯,೨೭೭, ಮಹಿಳೆಯರು-೨,೪೭,೫೨೨, ಒಟ್ಟು ೬,೭೬,೭೯೯

೨. ಜಿಲ್ಲೆಯ ಸಾಕ್ಷರತಾ ಪ್ರಮಾಣ ೬೧.೫೨, ೩೫.೯೩, ೪೯.೫೪

೩. ೧೯೯೧ರಿಂದ ೨೦೦೧ರ ಸಾಕ್ಷರತಾ ಪ್ರಮಾಣ ೧೪.೪೭

೪. ಪುರುಷರು ಮತ್ತು ಮಹಿಳೆಯರ ನಡುವೆ ಇರುವ ಸಾಕ್ಷರತೆ ಪ್ರಮಾಣ ೨೫.೫೯

೫. ನಗರ ಮತ್ತು ಗ್ರಾಮೀಣ ಪ್ರದೇಶಗಳ ನಡುವೆ ಇರುವ ಸಾಕ್ಷರತಾ ಪ್ರಮಾಣದ ಅಂತರ. ೨೪.೩೭

೬. ಶೇಕಡಾ ೪೦ಕ್ಕಿಂತ ಕಡಿಮೆ ಸಾಕ್ಷರತೆ ಹೊಂದಿರುವ ಗ್ರಾಮಗಳು ೩೪೬

ನಾವು ಮೇಲೆ ನೋಡಿದಂತೆ ರಾಯಚೂರು ಪ್ರದೇಶದ ಜಿಲ್ಲಾ ಸಾಕ್ಷರತಾ ಮಾಹಿತಿಗಳನ್ನು ಅಂಕಿ ಅಂಶಗಳ ಮುಖಾಂತರ ಕಾಣುತ್ತೇವೆ(ಜಿಲ್ಲಾ ಸಾಕ್ಷರತಾ ಸಮಿತಿ(ರಿ) ರಾಯಚೂರು, ಸಂಕ್ಷಿಪ್ತ ವರದಿ).

ಈ ಜಿಲ್ಲೆಯಲ್ಲಿ ಹಮ್ಮಿಕೊಂಡ ಸಾಕ್ಷರತೆಯ ವಿವಿಧ ಮಾದರಿಗಳು ಈ ಪ್ರದೇಶದ ಸಾಕ್ಷರತೆಯ ಅಭಿವೃದ್ಧಿಗೆ ಯಾವ ರೀತಿಯಾಗಿ ಸರ್ಕಾರದ ಪರವಾನಗಿಯ ಮೇರೆಗೆ ಹಿಂದುಳಿದ ಜಿಲ್ಲೆ ರಾಯಚೂರನ್ನು ಸಾಕ್ಷರತೆ ಗುಣಮಟ್ಟದಲ್ಲಿ ಇತರರ ಜಿಲ್ಲೆಗಳಿಗಿಂತ ಉತ್ತಮಪಡಿಸಿವೆ ಎಂಬುದನ್ನು ಜಿಲ್ಲಾ ಸಾಕ್ಷರತಾ ಸಮಿತಿಯು ಈ ಕೆಳಗಿನಂತೆ ಯೋಜನೆಗಳನ್ನು ಹಾಕಿಕೊಂಡಿದೆ. ಅವುಗಳೆಂದರೆ,

## ನಿರಂತರ ಶಿಕ್ಷಣ ಕಾರ್ಯಕ್ರಮ

ಈ ಕಾರ್ಯಕ್ರಮವು ಕೇಂದ್ರ ಮತ್ತು ರಾಜ್ಯ ಸರಕಾರ ಸಹಯೋಗದಲ್ಲಿ ಹಮ್ಮಿಕೊಂಡಿದೆ. ಇದರಿಂದ ಗ್ರಾಮೀಣ ಪ್ರದೇಶದಲ್ಲಿನ ಅನಕ್ಷರತೆ ಪಿಡುಗನ್ನು ತೊಲಗಿಸಲು ಸಾಧ್ಯವಾಯಿತು. ಸಾಕ್ಷರತೆಯ ಪ್ರಗತಿಯನ್ನು ಸಾಧಿಸಲು ಈ ಶಿಕ್ಷಣವು ೨೦೦೩ರಿಂದ ಜಿಲ್ಲೆಯಲ್ಲಿ ಪ್ರಾರಂಭಗೊಂಡಿದ್ದು ಇದರ ಕಾಲಾವಧಿ ೫ ವರ್ಷಗಳಾಗಿದ್ದು, ಇದನ್ನು ರಾಷ್ಟ್ರೀಯ ಸಾಕ್ಷರತಾ ಮೀಷನ್, ನವದೆಹಲಿ ಮತ್ತು ರಾಜ್ಯ ಸಾಕ್ಷರತಾ ಮಿಷನ್ ಪ್ರಾಧಿಕಾರ, ಬೆಂಗಳೂರು ಇವರ ಸಹಯೋಗವಿದ್ದು ಮೊದಲು ೩ ವರ್ಷಗಳಿಗೆ ರಾಷ್ಟ್ರೀಯ ಸಾಕ್ಷರತಾ ಮಿಷನ್ ಸಾಕ್ಷರತೆಗಾಗಿ ಶೇ.೧೦೦ ಅನುದಾನವನ್ನು ಬಿಡುಗಡೆ ಮಾಡುತ್ತದೆ.

ಇನ್ನುಳಿದ ಎರಡು ವರ್ಷಗಳಗೆ ರಾಷ್ಟ್ರೀಯ ಸಾಕ್ಷರತಾ ಮಿಷನ್ ಮತ್ತು ರಾಜ್ಯ ಸಾಕ್ಷರತಾ ಮಿಷನ್ ಪ್ರಾಧಿಕಾರಿಗಳು ಶೇಕಡಾ ೫೦ರಂತೆ ಅನುದಾನವನ್ನು ಬಿಡುಗಡೆ ಮಾಡುತ್ತದೆ.

ನಾವು ಈ ಗ್ರಾಮೀಣ ಸಾಕ್ಷರತೆಯನ್ನು ಅರಳಿ ಬೆಂಚಿ ಮತ್ತು ಆಶಾಪುರಗಳಲ್ಲಿ ಸುವರ್ಣ ಸಾಕ್ಷರತಾ ಆಂದೋಲನ ಶಿಬಿರವನ್ನು ಈ ಎರಡು ಗ್ರಾಮಗಳಲ್ಲಿ ಹಮ್ಮಿಕೊಂಡಿದ್ದು, ಇದು ೩೬ ದಿನಗಳಲ್ಲಿ ನಡೆದ ಈ ಗ್ರಾಮೀಣ ಸಾಕ್ಷರತೆ ಶಿಬಿರ ಯಶಸ್ವಿಯಾಗಿದ್ದನ್ನು ನಾವು ಕಾಣುತ್ತೇವೆ (ಸುದ್ದಿ ಮೂಲ ವಾರ್ತೆ : ಜನವರಿ ೧೬, ೨೦೦೭).

ಸುವರ್ಣ ಸಾಕ್ಷರತೆ ಆಂದೋಲನವು ಇಡೀ ರಾಜ್ಯಾದ್ಯಂತ ೧೫ ಸಾವಿರ ಸಾಕ್ಷರತಾ ಶಿಬಿರ ನಡೆಸಲು ನಿರ್ಧರಿಸಿದ್ದು, ರಾಯಚೂರು ಜಿಲ್ಲೆಯಲ್ಲಿ ೫೦೦ ಶಿಬಿರಗಳು ಡಿಸೆಂಬರ್ ೧೫ರಿಂದ ಗ್ರಾಮ ವಾಸ್ತವ್ಯ ಮಾಡಿ ಸಾಕ್ಷರತೆ ಪ್ರಮಾಣವನ್ನು ಹೆಚ್ಚಿಸುವುದು (ವಿಜಯ ಕರ್ನಾಟಕ : ಡಿಸೆಂಬರ್ ೦೮-೨೦೦೬).

## ವಯಸ್ಕರ ಶಿಕ್ಷಣ ಪಡೆ

ಬಹಳ ಕಾಲದವರೆಗೆ ನಮ್ಮ ದೇಶದಲ್ಲಿ ವಯಸ್ಕರ ಶಿಕ್ಷಣವನ್ನು ಪರಿಹಾರಾರ್ಥಕ ಶಿಕ್ಷಣವೆಂದು ಮಾತ್ರ ಗೌರವಿಸಲಾಗಿತ್ತು. ಏಕೆಂದರೆ ಯಾರು ತಮ್ಮ ಬಾಲ್ಯದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪಡೆಯುವ

ಅವಕಾಶದಿಂದ ವಂಚಿತರಾಗಿದ್ದರೋ ಅಂತಹವರ ಈ ನಷ್ಟವನ್ನು ತುಂಬಿಕೊಂಡುವ ಉದ್ದೇಶದಿಂದಲೇ ವಯಸ್ಕರ ಶಿಕ್ಷಣವನ್ನು ರೂಪಿಸಲಾಯಿತು. ಪ್ರಾಥಮಿಕ ಶಿಕ್ಷಣ ಪ್ರತಿಯೊಬ್ಬ ವ್ಯಕ್ತಿಯು ತನ್ನ ಬಾಲ್ಯದಲ್ಲಿ ಮುಗಿಸಲೇ ಬೇಕಾಗಿರುವ ಕಡ್ಡಾಯ ಶಿಕ್ಷಣವಾಗಿದೆ (ಬಸವಯ್ಯ ಮತ್ತು ನಾಗಪ್ಪ, ೧೯೭೨: ೭). ವಯಸ್ಕರ ಶಿಕ್ಷಣವೆಂದರೆ, ವಯಸ್ಕರ ಜೀವನವನ್ನು ಸಮಗ್ರವಾಗಿ ಉತ್ತಮಗೊಳಿಸುವ ಹಾಗೂ ಅವರ ಜೀವನದ ಎಲ್ಲ ಮುಖಗಳನ್ನು ಹೊಂದಿರುವ ಶಿಕ್ಷಣ. ೧೯೪೮ರಲ್ಲಿ ಭಾರತ ಸರ್ಕಾರವು ಶ್ರೀ ಮೋಹನ್ ಲಾಲ್ ಸಕ್ಸೇನ ಅವರ ಅಧ್ಯಕ್ಷತೆಯಲ್ಲಿ ವಯಸ್ಕರ ಶಿಕ್ಷಣದ ರೂಪುರೇಖೆಯನ್ನು ಚರ್ಚಿಸಲು ಒಂದು ಸಮಿತಿಯನ್ನು ರಚಿಸಿತು. ಈ ಸಮಿತಿಯು 'ವಯಸ್ಕರ ಶಿಕ್ಷಣದ ರೂಪುರೇಖೆ ಹಾಗೂ ಪರಿವಿಡಿ'ಯನ್ನು ವಿಸ್ತರಿಸುವ ಅವಶ್ಯಕತೆಯನ್ನು ವ್ಯಕ್ತಪಡಿಸಿತು. ಅಲ್ಲದೇ ಓದು ಬರಹ ಮತ್ತು ಅಂಕಗಣಿತಗಳ ಜೊತೆಗೆ ಇನ್ನೂ ಅನೇಕ ವಿಷಯಗಳನ್ನು ಸೇರಿಸಿಕೊಳ್ಳುವ ಸಲಹೆಯನ್ನು ಮುಂದಿಟ್ಟಿತು. ಈ ರೀತಿ 'ವಯಸ್ಕರ ಶಿಕ್ಷಣಕ್ಕೆ', 'ಸಮಾಜ ಶಿಕ್ಷಣ' ಎಂಬ ವಿಶಾಲಾರ್ಥವುಳ್ಳ ಪದ ಬಳಕೆಗೆ ಬಂದಿತು. ಈ ಸಮಿತಿಯ ಸಮಾನ ಶಿಕ್ಷಣದ ಧ್ಯೇಯಗಳನ್ನು ಈ ರೀತಿ ನಿರೂಪಿಸಿದೆ. ಸಾಮಾಜಿಕ ದಕ್ಷತೆ, ಸಾಮಾಜಿಕ ಐಕ್ಯತೆ, ಸಾಮಾಜಿಕ ಸಹಕಾರ, ಸಾಮಾಜಿಕ ಸಂಘಟನೆ ಮತ್ತು ಸಾಮಾಜಿಕ ಸುಧಾರಣೆ ಪರಿಸ್ಥಿತಿಗಳೇ ಆ ಧ್ಯೇಯಗಳು (ಬಸವಯ್ಯ ಮತ್ತು ನಾಗಪ್ಪ, ೧೯೭೨: ೭). ಇಂತಹ ವ್ಯವಸ್ಥೆಯನ್ನು ರಾಯಚೂರು ಜಿಲ್ಲಾ ಸಾಕ್ಷರತಾ ಸಮಿತಿಯ ವಯಸ್ಕರ ಶಿಕ್ಷಣ ಪಡೆಯ ಬಗ್ಗೆ ಈ ಕೆಳಗಿನಂತೆ ನೋಡಬಹುದು.

ಹದಿನೆಂಟು ವರ್ಷ ವಯಸ್ಸಿಗೆ ಮೀರಿದ ವಯಸ್ಕರಾದ ಸ್ತ್ರೀಯರು ಮತ್ತು ಪುರುಷರು ಅನ್ವಯಿಸಿದಂತೆ ಶಿಕ್ಷಣ ನೀಡುವ ಕ್ರಮವು ವಯಸ್ಕರ ಶಿಕ್ಷಣಕ್ಕೆ ಸೇರಿದೆ (ಕೃಷ್ಣಪ್ಪ ಎಸ್.:೧೯೭೬: ೨೭೧). ಅನಕ್ಷರತೆ ಹಿಂದಿನ ಕಾಲದಿಂದ ಇದ್ದರೂ ಇಂದು ಯಂತ್ರಯುಗದಲ್ಲಿ ಅನಕ್ಷರತೆಯನ್ನು ಹೋಗಲಾಡಿಸಲು ಈ ರಾಯಚೂರು ಪ್ರದೇಶದಲ್ಲಿ ವಯಸ್ಕರ ಶಿಕ್ಷಣ ನೀಡಲು ಸುಮಾರು ೧೮ರಿಂದ ೩೫ ವರ್ಷದವರಿಗೆ ವಯಸ್ಕರ ಶಿಕ್ಷಣವನ್ನು ಈ ಸಾಕ್ಷರತೆ ಸಮಿತಿಯು ನೀಡುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ.

ಒಂದು ಹೊತ್ತಿನ ಕೂಳಿಗೆ ದಿನವೆಲ್ಲ ದುಡಿಮೆ ಮಾಡುವುದು ಅನಿವಾರ್ಯ. ಈ ರೀತಿ ದುಡಿಮೆ ಮಾಡುವ ಬಡವರಾದ ವಯಸ್ಕರಿಗೆ ಓದು ಬರಹ ಕಲಿಯಲು ಇಷ್ಟವಿಲ್ಲ. ಈ ಅಂಶವನ್ನು ವಿಯಟ್ನಾಂ ವರದಿ ಮಾಡಿದೆ. ವಯಸ್ಕರು ಹಗಲೆಲ್ಲ ಹೊಲಗದ್ದೆಗಳಲ್ಲಿ ದುಡಿಮೆ ಮಾಡಿ ಮನೆಗೆ ರಾತ್ರಿ ಹೊತ್ತಾಗಿ ಹೋಗುತ್ತಾರೆ. ಈ ಹಿನ್ನೆಲೆಯಲ್ಲಿ ಶಾಲೆಗೆ ಬರುವ ವಯಸ್ಕರಿಗೆ ಓದು ಬರಹ ಕಲಿಯುವುದರ ಲಾಭ ಕಾಣಬೇಕು. ಶಾಲೆಗೆ ಬಂದಿದ್ದಕ್ಕೆ ಒಂದು ಪದ ಇಲ್ಲವೇ ಕಡೆಗೆ ಒಂದು ಅಕ್ಷರ ಕಲಿತಿದ್ದೇವೆ ಎಂಬ ಆಸೆ ಅಂಕುರಿಸಬೇಕು ಎಂಬ ಇಟಲಿ ವಯಸ್ಕ ರೈತರ ಅಭಿಪ್ರಾಯ (ಬಸವಯ್ಯ, ೧೯೭೨: ೬೯).

ಪ್ರಜಾಪ್ರಭುತ್ವದಲ್ಲಿ ಪ್ರತಿಯೊಬ್ಬ ಪ್ರಜೆಯೂ ತನ್ನ ಕರ್ತವ್ಯವನ್ನು ನೇರವೇರಿಸಲು ತನ್ನ ಪಾಲಿನ ಸಾಮಾಜಿಕ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸಲು ವಯಸ್ಕರ ಶಿಕ್ಷಣವು ಸಾಕಷ್ಟು ಸಿದ್ಧತೆಗಳನ್ನು

ಮಾಡಿಕೊಂಡಿದೆ. ವಯಸ್ಕರ ಶಿಕ್ಷಣಕ್ಕೆ ಇತ್ತೀಚೆಗೆ ಸಾಮಾಜಿಕ ಶಿಕ್ಷಣವೆಂದು ಹೊಸ ಹೆಸರನ್ನು ಕೊಟ್ಟಿರುವರು (ಕೃಷ್ಣಪ್ಪ, ೧೯೭೬ : ೨೭೨). ರಾಯಚೂರು ಪ್ರದೇಶದಲ್ಲಿ ಪುರುಷರು ಮತ್ತು ಸ್ತ್ರೀಯರಲ್ಲಿ ಸಾಕ್ಷರತೆಯನ್ನು ಹರಡುವುದು, ಜನಸಾಮಾನ್ಯರಲ್ಲಿ ಶಿಕ್ಷಣದ ಮನಸ್ಸನ್ನು ಬೆಳೆಸುವುದು ಸಾಕ್ಷರತಾ ಚಳವಳಿಯ ಮುಖ್ಯವಾದ ಅಂಶಗಳಲ್ಲಿ ಒಂದು.

೨೦೦೪-೦೫ರ ಸಾಲಿನಲ್ಲಿ ದೇವದುರ್ಗ ಮತ್ತು ಮಾನ್ವಿಯಲ್ಲಿ 'ವಯಸ್ಕರ ಶಿಕ್ಷಣ ಪಡೆ' ಎಂಬ ವಿನೂತನ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮವು ೧೪೦೦ ಜನರನ್ನು ಸಾಕ್ಷರರನ್ನಾಗಿ ಮಾಡುವ ಗುರಿ ಹೊಂದಿತ್ತು. ಆದರೆ ಗುಲ್ಬರ್ಗಾ ವಿಶ್ವವಿದ್ಯಾಲಯದ ರಾಷ್ಟ್ರೀಯ ಸೇವಾ ಯೋಜನೆಯ ಘಟಕದಿಂದ ಬಂದ ಮೌಲ್ಯಮಾಪನ ವರದಿಯ ಪ್ರಕಾರ ೮೦೯೮ ಜನರನ್ನು ಸಾಕ್ಷರರನ್ನಾಗಿ ಮಾಡಿದ್ದಾರೆ. ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಕಲಿಕೆಯನ್ನು ಪೂರ್ಣಗೊಳಿಸಿದವರಿಗೆ ಗೌರವ ಸಹಾಯಧನ ನೀಡಲಾಗಿತ್ತು.



**ವಯಸ್ಕರಿಗೆ ಸಾಕ್ಷರತೆ ಅರಿವು ಮೂಡಿಸುತ್ತಿರುವುದು**

* ಪ್ರತಿಯೊಬ್ಬರು ಸಾಕ್ಷರತೆಯನ್ನು ಗಳಿಸುವಂತಾಗಬೇಕು.

* ಆರೋಗ್ಯ ಪರಿಪಾಲನೆಗೆ ಅಗತ್ಯವೆನಿಸಿದ ನೀತಿನಿಯಮಗಳ ಬಗ್ಗೆ ಸಾಕಷ್ಟು ತಿಳುವಳಿಕೆ ಉಂಟಾಗಬೇಕು.

* ವ್ಯಕ್ತಿಯ ಆರ್ಥಿಕ ಮಟ್ಟ ಉತ್ತಮಗೊಳ್ಳಬೇಕು.

ವಯಸ್ಕರ ಶಿಕ್ಷಣವು ಪ್ರಾಥಮಿಕ ಶಿಕ್ಷಣಕ್ಕೆ ಪ್ರಬಲವಾದ ಒಂದು ಪೂರಕ ಸಾಕ್ಷರತೆಗೆ ಶಾಶ್ವತವಾದ ಸಾಧನವೆಂದರೆ 'ಸಾರ್ವತ್ರಿಕ ಪ್ರಾಥಮಿಕ ವಿದ್ಯಾಭ್ಯಾಸ'. ೧೮ರಿಂದ ೩೫ರ ವಯಸ್ಸಿನವರು ಅತಿಹೆಚ್ಚಿನ ಕೂಲಿಗೆ ಹೋಗುವುದು ಮತ್ತು ಹೆಂಗಸರು ಮನೆಯಲ್ಲಿ ಇರುವುದರಿಂದ ಇಂತಹವರಿಗೆ

ಸರಕಾರ ವಯಸ್ಕರ ಶಿಕ್ಷಣ ನೀಡಿ ಅವರನ್ನು ಅಕ್ಷರಸ್ಥರನ್ನಾಗಿ ಮಾಡುವುದು ರಾಯಚೂರು ಜಿಲ್ಲಾ ಸಾಕ್ಷರತಾ ಸಮಿತಿಯ ಕಾರ್ಯವಾಗಿದೆ.

## ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ

ಈ ಯೋಜನೆಯಲ್ಲಿ ಬಹುತೇಕ ಅನಕ್ಷರಸ್ಥ, ಬಡಕೂಲಿ ಕಾರ್ಮಿಕರ ಸಲುವಾಗಿ ಈ ಪ್ರದೇಶದ ನಿರಂತರ ಶಿಕ್ಷಣ ಯೋಜನೆಯಲ್ಲಿ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯನ್ನು ಅಳವಡಿಸಿಕೊಳ್ಳಲಾಗಿದೆ.

ಈ ಜಿಲ್ಲೆಯು ಸಾಕ್ಷರತೆಯಲ್ಲಿ ವಿಶಿಷ್ಟ ಮಾಡುವ ಮೂಲಕ ದೇಶದ ಗಮನ ಸೆಳೆದಿದ್ದು, ಸಾಕ್ಷ್ಯ ಚಿತ್ರದ ಯೋಗ ಪಡೆದಿದೆ. ಸಾಕ್ಷ್ಯಚಿತ್ರಕ್ಕಾಗಿ ಸಾಧನೆಗಳ ಮಾಹಿತಿಯುಳ್ಳ ೯ ಪುಟಗಳ ಪ್ರಗತಿ ಸಾಹಿತ್ಯ ಈಗಾಗಲೇ ಸಿದ್ಧವಾಗಿದ್ದು, ೨೭ ನಿಮಿಷಗಳ ಸಾಕ್ಷ್ಯಚಿತ್ರ ನಿರ್ಮಾಣವಾಗಲಿದೆ (ಕನ್ನಡ ಪ್ರಭ, ೩೦.೦೬.೨೦೦೭). ರಾಜ್ಯದ ಮಟ್ಟಿಗಂತೂ ಅಭಿವೃದ್ಧಿಯೊಂದಿಗೆ ಸಾಕ್ಷರತೆ ಸಾಧನೆಯಲ್ಲಿ ರಾಯಚೂರು ಪ್ರಥಮ ಸ್ಥಾನದಲ್ಲಿದೆ. ದೇಶದಲ್ಲಿ ಕಳೆದ ವರ್ಷ ಆಯ್ದ ಇನ್ನೂರು ಜಿಲ್ಲೆಗಳಲ್ಲಿ ಜಾರಿಗೆ ಬಂದಿರುವ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಗೆ ಆಯ್ಕೆಯಾದ ರಾಜ್ಯದ ಐದು ಜಿಲ್ಲೆಗಳಲ್ಲಿ ರಾಯಚೂರು ಜಿಲ್ಲೆ ಕೂಡ ಇದೆ. ಇಲ್ಲಿ ಅನಕ್ಷರಸ್ಥ, ಬಡವರು ಮತ್ತು ಕೂಲಿಕಾರ್ಮಿಕರಿಗಾಗಿ ಈ ಯೋಜನೆ ತರಲಾಗಿದೆ. ಆದುದರಿಂದ ದೇಶದಲ್ಲಿ ಇಂತಹ ಸಾಧನೆ ಮಾಡಿದ ಮೊದಲ ಜಿಲ್ಲೆ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು (ಕನ್ನಡ ಪ್ರಭ, ೩೦.೦೬.೨೦೦೭).

ಇದೀಗ ಸರ್ಕಾರದ ವಿವಿಧ ಹನ್ನೊಂದು ಇಲಾಖೆಗಳ ಸಮನ್ವಯ ಹಾಗೂ ಸರಕಾರೇತರ ಸಂಸ್ಥೆಗಳ ಸಮರ್ಥ ಸಹಯೋಗದಲ್ಲಿ ಪ್ರೇರಕರ ಗೌರವ ಧನ ನೀಡಿಕೆ ಇಲ್ಲದಿದ್ದರೂ ಅಭಿವೃದ್ಧಿಯೊಂದಿಗೆ ಸಾಕ್ಷರತೆ ಕ್ರಾಂತಿ ಮಾಡಲು ಮುಂದಾಗಿತ್ತು. ಇದಲ್ಲದೇ ಸರಕಾರಿ ಹಾಗೂ ಸರಕಾರೇತರ ಸಂಸ್ಥೆಗಳಾದ ಮಹಿಳಾ ಸಮಾಖ್ಯ, ಜಲ ಸಂವರ್ಧನ ಸಂಘ, ನೆಹರೂ ಯುವ ಕೇಂದ್ರ ಮತ್ತು ಜನರಹಿತ ಸಂಸ್ಥೆಗಳ ಸಹಯೋಗದ ಈ ಪ್ರಯೋಗವು ಯಶಸ್ವಿಯಾಗಿದ್ದು, ಜಿಲ್ಲೆಯ ಶೇಕಡಾ ೭೦ರಷ್ಟು ನಿರಂತರ ಶಿಕ್ಷಣ ಕೇಂದ್ರಗಳು ಸುಸ್ಥಿರವಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಗಿದೆ (ಕನ್ನಡ ಪ್ರಭ, ೩೦.೦೬.೨೦೦೭).

ರಾಜ್ಯದ ಇತರೆ ಜಿಲ್ಲೆಗಳಲ್ಲಿ ಈ ಪ್ರಯೋಗ ಸಂಪೂರ್ಣ ವಿಫಲವಾಗಿದ್ದು, ರಾಯಚೂರಿನಲ್ಲಿ ಮಾತ್ರ ತನ್ನ ಯಶೋಗಾಥೆಯನ್ನು ಮುಂದುವರೆಸಿಕೊಂಡು ಹೋಗುತ್ತಿದೆ. ಹೀಗಾಗಿ ದೇಶದ ಆರು ರಾಜ್ಯಗಳ ಸಾಕ್ಷರತೆಯಲ್ಲಿ ವಿಶಿಷ್ಟ ಸಾಧನೆ ಮಾಡಿದೆ. ತಲಾ ಒಂದೊಂದು ಜಿಲ್ಲೆಗಳನ್ನು ಮಾದರಿಯಾಗಿ ಆಯ್ಕೆ ಮಾಡಿಕೊಂಡಿದ್ದು, ಈ ಜಿಲ್ಲೆಗಳ ಸಾಕ್ಷ್ಯಚಿತ್ರಗಳನ್ನು ಚಿತ್ರೀಕರಿಸಿ ದೇಶದಾದ್ಯಂತ ಬಿತ್ತರಿಸಲು ರಾಷ್ಟ್ರೀಯ ಸಾಕ್ಷರತಾ ಮಿಷನ್ ಮುಂದೆ ಬಂದಿದೆ ಎಂದು ಮೈಸೂರಿನಲ್ಲಿರುವ ರಾಜ್ಯ ಸಂಪನ್ಮೂಲ ಕೇಂದ್ರದ ರಾಯಚೂರು ಉಸ್ತುವಾರಿ ಅಧಿಕಾರಿ ಹೇಳಿದರು (ಕನ್ನಡ ಪ್ರಭ, ೩೦.೦೬.೨೦೦೭).

ಹೀಗೆ ಈ ಮೇಲಿನ ಅಂಶಗಳನ್ನು ಗಮನಿಸಿದಾಗ ರಾಯಚೂರು ಜಿಲ್ಲಾ ಸಾಕ್ಷರತಾ ಸಮಿತಿಯು ಕೆಲವು ಯೋಜನೆಗಳನ್ನು ಹಾಕಿಕೊಂಡು ಅದರಲ್ಲಿ ಯಶಸ್ವಿಯಾಗಿದ್ದಾರೆ. ಆದುದರಿಂದ ಈ ಜಿಲ್ಲೆಯ ಕರ್ನಾಟಕ ಇತರ ಜಿಲ್ಲೆಗಳಿಗೆ ಮಾದರಿಯಾಗಿದೆ. ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ ಮತ್ತು ನಿರಂತರ ಶಿಕ್ಷಣ ಕೇಂದ್ರ ಇವು ಅನಕ್ಷರತೆ ತೊಲಗಿಸುವಲ್ಲಿ ಮತ್ತು ಸಾಕ್ಷರತೆ ಪ್ರಗತಿಗಾಗಿ ಶ್ರಮಿಸಿವೆ ಎಂದು ಹೇಳಬಹುದು.

**ಪುನಃಶ್ಚೇತನ ಕಾರ್ಯಕ್ರಮ**

ರಾಯಚೂರು ಜಿಲ್ಲಾ ಸಾಕ್ಷರತಾ ಸಮಿತಿಯ ಕೆಲವು ಸೇವಾ ಸಂಘ ಸಂಸ್ಥೆಗಳಿಗೆ ಸಾಕ್ಷರತೆ ಪ್ರಗತಿ ಮತ್ತು ಇಲ್ಲಿನ ಅನಕ್ಷರತೆಯನ್ನು ತೊಡೆದು ಹಾಕುವುದಕ್ಕಾಗಿ ಈ ಗ್ರಾಮ ಪಂಚಾಯ್ತಿ ಯೋಜನೆಗಳ ಅಡಿಯಲ್ಲಿ ಅನಕ್ಷರಸ್ಥರನ್ನು ಗುರುತಿಸಿ ಅವರನ್ನು ಸಾಕ್ಷರರನ್ನಾಗಿ ಮಾಡುವ ಉದ್ದೇಶದಿಂದ ಈ ಸಮಿತಿಯು ಪುನಃಶ್ಚೇತನ ಕಾರ್ಯಕ್ರಮ ಹಮ್ಮಿಕೊಂಡಿದೆ.

ಈ ಪುನಃಶ್ಚೇತನ ಕಾರ್ಯಕ್ರಮವು ಪ್ರತಿ ೫ ಗ್ರಾಮ ಪಂಚಾಯತ್‌ಗೆ ಒಂದರಂತೆ ಜಿಲ್ಲೆಯಲ್ಲಿ ಒಟ್ಟು ೪೨ ಸಮುಚ್ಚಯಗಳನ್ನಾಗಿ ವಿಂಗಡಿಸಿದ್ದು, ಪ್ರತಿಸಮುಚ್ಚಯವನ್ನು ಆಸಕ್ತ ಸಂಘ-ಸಂಸ್ಥೆ, ಸೇವಾ ಸಂಸ್ಥೆಗಳಿಗೆ ದತ್ತು ಕೊಡಲಾಗಿದೆ. ಈ ಸ್ವಯಂ ಸೇವಾ ಸಂಸ್ಥೆಗಳೀಗೆ ಒಡಂಬಡಿಕೆ ಮಾಡಿಕೊಂಡು ಕಲಿಕೆಗೆ ಬೇಕಾದ ಬೋಧನಾ ಮತ್ತು ಕಲಿಕಾ ಸಾಮಗ್ರಿಗಳನ್ನು ವಿತರಿಸಲಾಗುವುದು. ಅವಶ್ಯವಿರುವ ಅನುದಾನವನ್ನು ಜಿಲ್ಲಾ ಸಾಕ್ಷರತಾ ಸಮಿತಿಯಿಂದ ನೇರವಾಗಿ ದತ್ತು ಸಂಸ್ಥೆಗಳಿಗೆ ಬಿಡುಗಡೆ ಮಾಡಲಾಗುತ್ತಿದೆ. ರಾಯಚೂರು ಪ್ರದೇಶದಲ್ಲಿ ಸಾಕ್ಷರತೆಯ ಪುನಃಶ್ಚೇತನ ಕಾರ್ಯಕ್ರಮದ ಮುಖಾಂತರ ೮೬ ಸಾವಿರ ಸಾಕ್ಷರರನ್ನಾಗಿ ಮಾಡುವ ಗುರಿ ಇಟ್ಟುಕೊಳ್ಳಲಾಗಿದೆ.

ಈ ಪುನಃಶ್ಚೇತನ ಕಾರ್ಯಕ್ರಮವು ಈಗ ಈ ಪ್ರದೇಶದಲ್ಲಿ ಮಹಿಳೆಯರಿಗಾಗಿ ಮತ್ತು ವಯಸ್ಕರಿಗಾಗಿ ಕಾರ್ಯಕ್ರಮಗಳನ್ನು ರೂಪಿಸಿ ಆ ಮೂಲಕ ಅವರಿಗೆ ಶಿಕ್ಷಣದ ಪ್ರಜ್ಞೆಯನ್ನು ಮೂಡಿಸುವ ಮಹತ್ವದ ಉದ್ದೇಶವನ್ನು ಹೊಂದಿದೆ. ಈ ಯೋಜನೆಯ ಅನುದಾನಿತ ಸಂಘ ಸಂಸ್ಥೆಗಳ ಅಡಿಯಲ್ಲಿ ಹಮ್ಮಿಕೊಂಡಿರುವುದನ್ನು ನಾವು ಕಾಣುತ್ತೇವೆ.

**ಕಲಿಕೆ-ಗಳಿಕೆ**

ಇಲ್ಲಿ ಮುಖ್ಯವಾಗಿ ಅಕ್ಷರ ಕಲಿತರೆ ಜೀವನವೆಲ್ಲಾ 'ಗಳಿಕೆ' ಮಾಡಿದಂತೆ ಎಂಬ ನೀತಿಯಂತೆ ರೂಪಿಸಲಾಗಿದೆ. ರಾಯಚೂರು ಪ್ರದೇಶದಲ್ಲಿ ಸ್ವಸಹಾಯ ಗುಂಪುಗಳಲ್ಲಿರುವ ಅನಕ್ಷರಸ್ಥರನ್ನು ಗುರುತಿಸುವುದರ ಜೊತೆಗೆ ಸ್ತ್ರೀಯರಿಗೆ ಹೆಚ್ಚಿನ ಆದ್ಯತೆ ನೀಡಿ ಅವರನ್ನು ಅಕ್ಷರಸ್ಥರನ್ನಾಗಿ ಮಾಡುವುದು ಈ ಸಮಿತಿಯ ಆಶಯವಾಗಿದೆ.

ಈ ಕಾರ್ಯಕ್ರಮ ಪುನಃಶ್ಚೇತನ ಅಡಿಯಲ್ಲಿ ಬರುತ್ತದೆ. ಈ ಜಿಲ್ಲೆಯಲ್ಲಿರುವ ಸ್ವಸಹಾಯ ಗುಂಪುಗಳಲ್ಲಿರುವ ಅನಕ್ಷರಸ್ಥರನ್ನು ಗುರುತಿಸಿ ಅವರಿಗೆ ಅಕ್ಷರಜ್ಞಾನ ನೀಡುವುದು ಇದರ ಉದ್ದೇಶ ೪೦ ಸಾವಿರ ಜನರನ್ನು ಸಾಕ್ಷರಗೊಳಿಸುವ ಗುರಿ ಹೊಂದಿದೆ. ಇದರಿಂದ ಸ್ವಸಹಾಯ ಗುಂಪುಗಳ ಅಭಿವೃದ್ಧಿಯನ್ನು ನಾವು ಕಾಣುತ್ತೇವೆ.

**ತರಬೇತಿ :** ಸುವರ್ಣ ಕರ್ನಾಟಕ ಸಾಕ್ಷರತಾ ಆಂದೋಲನದ ಅಂಗವಾಗಿ ಡಿ.೧೬ರಿಂದ ೧೭ರವರೆಗೆ ಸಿರವಾರದ ನೋಡಲ್ ಕೇಂದ್ರದ ವ್ಯಾಪ್ತಿಯ ಮುಂದುವರಿಕೆ ಶಿಕ್ಷಣ ಕೇಂದ್ರಗಳ ಸ್ವಯಂಸೇವಕರಿಗೆ ೧೮ ದಿನಗಳ ಶೀಘ್ರ ಕಲಿಕೆ ತರಬೇತಿ ಕೊಟ್ಟಿರುವುದನ್ನು ನಾವು ಕಾಣುತ್ತೇವೆ (ಸುದ್ದಿಮೂಲ ಪತ್ರಿಕೆ, ೧೧-೧೨-೨೦೦೬). ಈ ಕಾರ್ಯಕ್ರಮದ ಯೋಜನೆಯಂತೆ ಕಲಿಕೆಗಳಿಕೆಯ ವಿಷಯದಲ್ಲಿ ಹಲವಾರು ತರಬೇತಿಗಳನ್ನು ನೀಡಿ ಅವರು ಅಕ್ಷರಜ್ಞಾನ ಗಳಿಕೆಯು ರಾಯಚೂರು ಜಿಲ್ಲಾ ಸಾಕ್ಷರತಾ ಸಮಿತಿ ಮಾಡಿದ ಸಾಧನೆಯು ಅನನ್ಯವಾದುದು.

## ಏಡ್ಸ್ ಜಾಗೃತಿ ಕಾರ್ಯಕ್ರಮ

ಈ ಸಮಿತಿಯು ಸಾಕ್ಷರತೆ ಮತ್ತು ಏಡ್ಸ್(ಹೆಚ್.ಐ.ವಿ) ನಿಯತ್ರಣಕ್ಕಾಗಿ ಇಡೀ ರಾಯಚೂರು ಪ್ರದೇಶದಲ್ಲಿ ಹಲವು ಕಾರ್ಯಕ್ರಮಗಳು ಮತ್ತು ಬೀದಿನಾಟಕಗಳ ಮುಖಾಂತರ ಏಡ್ಸ್ ಜಾಗೃತಿ ಕಾರ್ಯಕ್ರಮವನ್ನು ಹಮ್ಮಿಕೊಂಡಿತು. ಸಾಕ್ಷರತೆಗೆ ಮಹತ್ವ ಕೊಟ್ಟಷ್ಟೇ ಏಡ್ಸ್ ಕಾರ್ಯಕ್ರಮಕ್ಕೂ ಮಹತ್ವ ನೀಡಲಾಗಿತ್ತು. ಹೆಚ್.ಐ.ವಿ.ಸೋಂಕಿನಿಂದ ನರಳುತ್ತಿರುವವರನ್ನು ಸಮಾಜದಿಂದ ದೂರ ಮಾಡದಿರುವಂತೆ ಜನರಲ್ಲಿ ಪ್ರಜ್ಞೆ ಮೂಡಿಸುವುದು ಮತ್ತು ರೋಗಿಗಳಿಗೆ ಮನಸ್ಥೈರ್ಯ ತುಂಬುವುದು, ಅವರಿಗೆ ಜೀವನದ ಬಗ್ಗೆ ಆಶಯವನ್ನು ಮೂಡಿಸುವುದು ಈ ಜಿಲ್ಲಾ ಸಾಕ್ಷರತೆಯ ಮತ್ತೊಂದು ಸಾಧನೆಯಾಗಿದೆ.

ರಾಯಚೂರು ಜಿಲ್ಲಾ ಸಾಕ್ಷರತಾ ಸಮಿತಿಯು ಸಾಕ್ಷರತೆ ಜೊತೆಗೆ ಸಾಮಾಜಿಕ ಕಾರ್ಯಗಳನ್ನು ಮಾಡುತ್ತದೆ. ಇಲ್ಲಿ ಕರ್ನಾಟಕ ರಾಜ್ಯ 'ಏಡ್ಸ್ ನಿಯಂತ್ರಣ ಸಂಸ್ಥೆ' ಇವರ ಸಹಯೋಗದಿಂದ ಜಿಲ್ಲಾ ಸಾಕ್ಷರತಾ ಸಮಿತಿ ಮತ್ತು ವಿವಿಧ ಸ್ವಯಂ ಸೇವಾ ಸಂಸ್ಥೆಗಳ ಸಹಯೋಗದಿಂದ ಜಿಲ್ಲೆಯಾದ್ಯಂತ ಈಗಾಗಲೇ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ. ಇಲ್ಲಿ ೧೩ರಿಂದ ೨೪ರ ವಯಸ್ಸಿನ ಎಲ್ಲರಿಗೂ ಎಚ್. ಐ.ವಿ ಏಡ್ಸ್ ಕುರಿತು ಗೋಡೆ ಬರಹ, ಬಿತ್ತಿ ಪತ್ರ, ವಿವಿಧ ಪ್ರಚಾರ ಮಾಧ್ಯಮದ ಮೂಲಕ ಅರಿವು ಮಾಡಿಸುವ ಕಾರ್ಯಕ್ರಮಗಳು ನಡೆದಿದೆ (ಸಂದರ್ಶನ : ಬಸಪ್ಪ, ೨೩.೦೭.೨೦೦೭)

ಮೊದಲಿಗೆ ದೇವದುರ್ಗ ತಾಲೂಕಿನಲ್ಲಿ ಏಡ್ಸ್ ಬಗ್ಗೆ ಸಾಕ್ಷರತಾ ಸಮಿತಿಯ ವತಿಯಿಂದ ಈ ಪ್ರಯೋಗವನ್ನು ಹಮ್ಮಿಕೊಳ್ಳಲಾಯಿತು. ಮುಂದೆ ಜಿಲ್ಲೆಯಲ್ಲಿ ಏಡ್ಸ್ ಬಗ್ಗೆ ಸಂಪೂರ್ಣವಾಗಿ ಯಶಸ್ವಿಯಾಗಿದ್ದುದನ್ನು ಕಾಣುತ್ತೇವೆ.

ಕಲಾ ಜಾಥಗಳ ಮುಖಾಂತರ, ಬೀದಿ ನಾಟಕಗಳ ಮುಖಾಂತರ ಇಡೀ ಜಿಲ್ಲೆಯಾದ್ಯಂತ ಏಡ್ಸ್ ಬಗ್ಗೆ ಜನರಲ್ಲಿ ಅರಿವನ್ನು ಮೂಡಿಸುವಲ್ಲಿ ಜಿಲ್ಲಾ ಸಾಕ್ಷರತೆಯು ಗಣನೀಯ ಪ್ರಗತಿ ಸಾಧಿಸಿದೆ. (ಸುದ್ದಿಮೂಲ ಪತ್ರಿಕೆ, ೦೯-೦೨-೨೦೦೭). ಹೀಗೆ ಸಮಾಜದ ಪ್ರಗತಿಗಾಗಿ ಈ ಸಮಿತಿಯು ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಪೂರೈಸುವ ಮೂಲಕ ಈ ಪ್ರದೇಶವನ್ನು ಸಾಕ್ಷರತೆಯ ನಾಡನ್ನಾಗಿ ಮಾಡಿತು.

### ವಿದ್ಯಾರ್ಥಿಗಳ ಮೂಲಕ ಸಾಕ್ಷರತೆ

ಈ ಸಮಿತಿಯು ಹಲವು ಯೋಜನೆಗಳಲ್ಲಿ ವಿದ್ಯಾರ್ಥಿಗಳ ಮೂಲಕ ಸಾಕ್ಷರತೆ ಪ್ರಗತಿ ಮಾಡುವುದು ಕೂಡ ಒಂದಾಗಿದೆ. ಇಲ್ಲಿ ವಿದ್ಯಾರ್ಥಿಗಳನ್ನು ಕಾಲೇಜುಗಳಲ್ಲಿ ಆಯ್ಕೆ ಮಾಡಿ ಅವರಿಗೆ ಮೊದಲು ಈ ಸಮಿತಿಯಿಂದ ತರಬೇತಿ ನೀಡಿ ನಂತರ ತಮ್ಮ ಗ್ರಾಮಗಳಲ್ಲಿ ಅನಕ್ಷರಸ್ಥರನ್ನು ಗುರುತಿಸಿ, ಅಕ್ಷರಸ್ಥರನ್ನಾಗಿ ಮಾಡುವುದು ಇವರ ಉದ್ದೇಶವಾಗಿದೆ.

ಪ್ರತಿಯೊಬ್ಬ ವಿದ್ಯಾರ್ಥಿಯು ೭ ಜನ ಅವಿದ್ಯಾವಂತರನ್ನು ಗುರುತಿಸಿ ಅವರನ್ನು ೫ ತಿಂಗಳಲ್ಲಿ ಅಕ್ಷರಸ್ಥರನ್ನಾಗಿ ಮಾಡುವ ಯೋಜನೆ ನಡೆಯುತ್ತಿದೆ. ಯೋಜನೆ ೩೨ ಸಾವಿರ ಜನರನ್ನು ಸಾಕ್ಷರರನ್ನಾಗಿ ಮಾಡುವ ಗುರಿಯನ್ನು ಹೊಂದಿದೆ. ಸಾಕ್ಷರತೆಯನ್ನು ಕಲಿಸುವ ವಿದ್ಯಾರ್ಥಿಗೆ ಪ್ರೋತ್ಸಾಹ ೧೦ ಅಂಕಗಳನ್ನು ನೀಡುವುದು. ಇದು ವಿದ್ಯಾರ್ಥಿಗೆ ಹಾಗೂ ಅನಕ್ಷರಸ್ಥರಿಗೆ ಇಬ್ಬರಿಗೂ ಲಾಭವಾಗುತ್ತದೆ. ಇದು ರಾಯಚೂರು ಸಾಕ್ಷರತಾ ಸಮಿತಿ ಹಮ್ಮಿಕೊಂಡಿದ್ದ ಯೋಜನೆಗಳಲ್ಲಿ ಪ್ರಮುಖವಾದದ್ದು (ಸಂದರ್ಶನ : ಬಸಪ್ಪ, ೨೩.೦೨.೨೦೦೭). ಇದರಿಂದ ಇಡೀ ರಾಯಚೂರನಲ್ಲಿ ಇಂತಹ ವಿದ್ಯಾರ್ಥಿಗಳಿಂದ ಸಾಕ್ಷರತೆ ಪ್ರಗತಿಯನ್ನು ಸಾಧಿಸುವಲ್ಲಿ ಯಶಸ್ವಿಯಾದದ್ದನ್ನು ಕಾಣಬಹುದು.

### ಶಿಬಿರಾಧರಿತ ಕಾರ್ಯಕ್ರಮ

ಈ ಕಾರ್ಯಕ್ರಮ ಗ್ರಾಮ ಯೋಜನೆಯಾಗಿದ್ದು, ಇಲ್ಲಿ ಮುಖ್ಯವಾಗಿ ಹೆಚ್ಚು ಅನಕ್ಷರಸ್ಥರು ಇರುವ ಗ್ರಾಮಗಳನ್ನು ಗುರುತಿಸಿ ಅಲ್ಲಿ ಸಾಕ್ಷರತೆಯನ್ನು ಅಭಿವೃದ್ಧಿ ಮಾಡುವುದಾಗಿದೆ. ಇದಕ್ಕೆ ಸರಕಾರದಿಂದ ಹಲವಾರು ಸೌಲಭ್ಯಗಳನ್ನು ಈ ಗ್ರಾಮಸ್ಥರಿಗೆ ಒದಗಿಸಿಕೊಡುವುದು, ಜೊತೆಗೆ ಅಕ್ಷರ ಪ್ರಗತಿಗಾಗಿ ಹಲವಾರು ಶಿಬಿರಗಳನ್ನು ಹಮ್ಮಿಕೊಳ್ಳುವುದು. ಹಾಗೆಯೇ ವೃತ್ತಿ ಕೌಶಲ್ಯ ತರಬೇತಿ ನೀಡಿರುವುದನ್ನು ಕಾಣಬಹುದು.

ಸುಮಾರು ಶೇಕಡಾ ೪೦ಕ್ಕಿಂತ ಕಡಿಮೆ ಸಾಕ್ಷರತೆಯುಳ್ಳ ಗ್ರಾಮಗಳನ್ನು ಗುರುತಿಸಿ ಆ ಗ್ರಾಮದ ಸಾಕ್ಷರತೆ ಪ್ರಗತಿ ಸಾಧಿಸಲು ೧೮ ದಿನಗಳ ಕಾಲ ವಸತಿರಹಿತ ಶಿಬಿರಗಳನ್ನು ಹಮ್ಮಿಕೊಂಡಿದೆ. ಸಾಕ್ಷರರನ್ನಾಗಿಸುವುದು ಮತ್ತು ವೃತ್ತಿ ಕೌಶಲ್ಯ ತರಬೇತಿ ನೀಡುವುದು ಈ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿದೆ. ಈಗಾಗಲೇ ರಾಯಚೂರು ಪ್ರದೇಶದಲ್ಲಿ ಜಿಲ್ಲಾ ಸಾಕ್ಷರತಾ ಸಮಿತಿಯು ಈ

ಯೋಜನೆಯನ್ನು ಹಮ್ಮಿಕೊಂಡಿದೆ. ಈ ಪ್ರದೇಶದಲ್ಲಿ ೩೪೩ ಗ್ರಾಮಗಳು ಶೇಕಡಾ ೪೦ ಕಡಿಮೆ ಸಾಕ್ಷರತೆಯನ್ನು ಹೊಂದಿದೆ. ಈ ೩೪೩ ಗ್ರಾಮಗಳು ೧೨೬ ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಿ ಬರುತ್ತಿದ್ದು ಪ್ರಥಮ ಹಂತದಲ್ಲಿ ತಾಲೂಕಿಗೆ ೧೦ ಶಿಬಿರಗಳಂತೆ ಹಮ್ಮಿಕೊಳ್ಳಬೇಕಾಗಿದೆ. ಪ್ರತಿ ಶಿಬಿರಗಳಲ್ಲಿ ೫೦ ಜನ ಅನಕ್ಷರಸ್ಥರನ್ನು ಗುರುತಿಸಿ ಅಕ್ಷರಸ್ಥರನ್ನಾಗಿ ಮಾಡುವುದು ಜಿಲ್ಲಾ ಸಾಕ್ಷರತಾ ಸಮಿತಿಯ ಗುರಿಯಾಗಿದೆ. ಹೀಗೆ ಶಿಬಿರಗಳ ಮುಖಾಂತರ ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡುವುದರ ಜೊತೆಗೆ ಹಿಂದುಳಿದ ರಾಯಚೂರು ಜಿಲ್ಲೆಯಲ್ಲಿ ಈ ಸಾಕ್ಷರತೆಯ ಪ್ರಗತಿಯಿಂದಾಗಿ ಗ್ರಾಮಗಳು ಅಭಿವೃದ್ಧಿ ಹೊಂದುತ್ತಿರುವುದನ್ನು ಕಾಣುತ್ತೇವೆ.




**ನೋಡಲ್ ಪ್ರೇರಕರಿಗೆ (ಸಾಕ್ಷರತಾ ಕಲಿಯುತ್ತಿರುವವರಿಗೆ) ವೃತ್ತಿಕೌಶಲ್ಯ ತರಬೇತಿ ಶಿಬಿರ**

## ಹೊಲಿಗೆ ತರಬೇತಿ ಕಾರ್ಯಕ್ರಮ

ಮಹಿಳೆಯರ ಗಮನ ಸೆಳೆಯುವುದಕ್ಕಾಗಿ ಈ ಹೊಲಿಗೆ ತರಬೇತಿ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಪುರುಷರಿಗಿಂತ ಮಹಿಳೆಯರು ಹೆಚ್ಚಾಗಿ ಅನಕ್ಷರಸ್ಥರಾಗಿರುತ್ತಾರೆ. ಆದುದರಿಂದ ಈ ಯೋಜನೆ ಜಾರಿಗೊಳಿಸಿ ಮಹಿಳೆಯರನ್ನು ಅಕ್ಷರಸ್ಥರನ್ನಾಗಿ ಮಾಡುವುದೇ ಈ ಸಮಿತಿಯ ಗುರಿಯಾಗಿದೆ.

ಮಹಿಳೆಯರ ಪ್ರಗತಿ ಸಾಧಿಸುವ ದೃಷ್ಟಿಯಿಂದ ರಾಯಚೂರು ಜಿಲ್ಲಾ ಸಾಕ್ಷರತಾ ಸಮಿತಿಯು ಮಹಿಳೆಯರಿಗಾಗಿ ವಿಶೇಷವಾಗಿ ಹೊಲಿಗೆ ತರಬೇತಿ ಕಾರ್ಯಕ್ರಮವನ್ನು ನೋಡಲ್ ಕೇಂದ್ರಗಳಲ್ಲಿ ಹಮ್ಮಿಕೊಳ್ಳಲಾಗಿದೆ. ಪ್ರತಿ ನೋಡಲ್ ಕೇಂದ್ರಗಳಲ್ಲಿ ೨೫ ಜನ ಮಹಿಳೆಯರಿಗೆ ಹೊಲಿಗೆ ತರಬೇತಿ ನೀಡಲಾಗುತ್ತಿದೆ. ಒಟ್ಟು ಸುಮಾರು ೪೩೫ ಸ್ತ್ರೀಯರಿಗೆ ಹೊಲಿಗೆ ಯಂತ್ರದ ತರಬೇತಿ ನೀಡಿದೆ.

ಜಿಲ್ಲಾ ಸಾಕ್ಷರತಾ ಸಮಿತಿಯು ರಾಯಚೂರು ಪ್ರದೇಶದಲ್ಲಿ ಅನಕ್ಷರತೆ ಹೋಗಲಾಡಿಸಲು, ಸಾಕ್ಷರತೆಯ ಪ್ರಗತಿಗಾಗಿ ಈ ಮೇಲಿನ ಅಂಶಗಳನ್ನು ಪರಿಶೀಲಿಸಿದಾಗ ಗಣನೀಯ ಪ್ರಗತಿಯನ್ನು

ಕಂಡಿರುವುದನ್ನು ಗಮನಿಸಬಹುದು. ಆದರೂ ಇನ್ನು ಕೆಲವು ಕಾರ್ಯಕ್ರಮಗಳನ್ನು ಹಾಕಿಕೊಂಡು ಸಾಕ್ಷರತೆ ಅಭಿವೃದ್ಧಿಗಾಗಿ ದುಡಿಯುತ್ತಿರುವುದು. ಈ ಪ್ರದೇಶಕ್ಕೆ ನೆಮ್ಮದಿಯ ವಿಷಯ. ಅನಕ್ಷರಸ್ಥ ಜನರನ್ನು ಅಕ್ಷರಸ್ಥರನ್ನಾಗಿ ಮಾಡುವ ಮುಂಚೆ ಇವರು ರಾಯಚೂರು ಪ್ರದೇಶದ ಪ್ರತಿಯೊಂದು ಹಳ್ಳಿಗಳಿಗೆ ತೆರಳಿ, ಈ ಸಾಕ್ಷರತೆಯ ಗುಣಮಟ್ಟ ತಿಳಿಸಿದ್ದಾರೆ. ಅಲ್ಲದೆ ಈ ಸಮಿತಿಯು ಏಡ್ಸ್ ಜಾಗೃತಿ, ಮಹಿಳೆಯರಿಗೆ ಹೊಲಿಗೆ ತರಬೇತಿ ಇನ್ನು ಮುಂತಾದವುಗಳ ಜೊತೆ ವಯಸ್ಕರಿಗೆ ಸಾಕ್ಷರತೆಯನ್ನು ನೀಡುತ್ತಿರುವುದು ಈ ಸಮಿತಿಯ ಸಾಧನೆ. ಇದರ ಪರಿಣಾಮವಾಗಿ ಸರ್ಕಾರದ ಸೌಲಭ್ಯಗಳನ್ನು ಪಡೆದುಕೊಂಡು ಇನ್ನಷ್ಟು ಸಾಕ್ಷರತೆ ಪ್ರಗತಿಗಾಗಿ ಕೆಲವು ಕಾರ್ಯಕ್ರಮ ಹಾಕಿಕೊಂಡು ಇಲ್ಲಿ ಸಾಕ್ಷರತೆಯನ್ನು ಉತ್ತಮಪಡಿಸುವಲ್ಲಿ ಈ ಜಿಲ್ಲಾ ಸಾಕ್ಷರತಾ ಸಮಿತಿ ಕೆಲಸ ಮಾಡಲು ಮುಂದಾಗಿದೆ ಎಂದು ಹೇಳಬಹುದು.

ಇದರಿಂದಾಗಿ ಈ ಪ್ರದೇಶದಲ್ಲಿ ಇಂತಹ ಯೋಜನೆಗಳನ್ನು ಜಾರಿಗೊಳಿಸುವ ಮುಖಾಂತರ ಮಹಿಳೆಯರ ಪ್ರಗತಿ ಸಾಧಿಸುವುದರ ಜೊತೆಗೆ, ಅಕ್ಷರಸ್ಥರನ್ನಾಗಿ ಮಾಡುವುದರಲ್ಲಿ ಈ ಜಿಲ್ಲೆಯ ಸಾಕ್ಷರತಾ ಸಮಿತಿಯ ಸಾಧನೆಯಾಗಿದೆ ಎಂದು ಹೇಳಬಹುದು.

## ಸಮುದಾಯ ಚಳವಳಿ

ಎಪ್ಪತ್ತರ ದಶಕದ ಕೊನೆಯ ಭಾಗದಲ್ಲಿ ರಂಗತರಬೇತಿ ಶಿಬಿರಗಳ ಮೂಲಕ ಬಾದಲ್ ಸರ್ಕಾರ ಮೂರನೇ ರಂಗಭೂಮಿಯ ತತ್ವವನ್ನು ಇಲ್ಲಿ ಅಳವಡಿಸಿ ಹೊಸ ಭಾಷೆ, ಹೊಸ ಅಭಿನಯ ಕೌಶಲ, ಹೊಸ ರೀತಿಯ ಪ್ರದರ್ಶನಗಳನ್ನು ಬೀದಿರಂಗಭೂಮಿಯ ಮೇಲೆ ತಂದರು. ಇದರಿಂದ ಕರ್ನಾಟಕದ ಕೆಲವು ಬೀದಿನಾಟಕ ತಂಡಗಳು ಉತ್ತೇಜನಗೊಂಡವು. ಇದರೊಂದಿಗೆ ರಾಯಚೂರು ಪ್ರದೇಶದಲ್ಲಿ ಕೂಡ ಬೀದಿನಾಟಕಗಳ ಪ್ರಭಾವ ಹೆಚ್ಚಾಗತೊಡಗಿತು.

ಕರ್ನಾಟಕದಲ್ಲಿ ಬೀದಿನಾಟಕಗಳನ್ನು ಮೊಟ್ಟಮೊದಲಿಗೆ ಆಡಿದ್ದು ಎಸ್.ಎನ್.ಮೂರ್ತಿ ನೇತೃತ್ವದ ಚಿತ್ರಾ ಬೀದಿನಾಟಕ ತಂಡ (೧೯೪೭). ಮೊದಲ ಬೀದಿ ನಾಟಕ ಪ್ರಯೋಗ ಮೂರ್ತಿಯವರ 'ಕಟ್ಟು', 'ಬಂದರೋ ಬಂದರು', 'ಬಸ್‌ಸ್ಟಾಪ್', 'ಹಂಚಿ ಪ್ರಕರಣ' ಮತ್ತು 'ಉಳ್ಳವರ ನೆರಳು' ಇನ್ನಿತರ ನಾಟಕಗಳನನ್ನು ಈ ಚಿತ್ರತಂಡ ಯಶಸ್ವಿಯಾಗಿ ಅಭಿನಯಿಸುತ್ತದೆ. ಇದುವರೆಗೂ ಈ ನಾಟಕಗಳು ನೂರಾರು ಪ್ರದರ್ಶನ ಕಂಡು ಅಪಾರ ಜನಮೆಚ್ಚುಗೆ ಪಡೆದಿವೆ. ಇದರಂತೆ ರಾಯಚೂರಿನಲ್ಲಿ ಕೂಡ ಕೆರೆಗೆ ಹಾರ, ತಾಮ್ರಪತ್ರ, ಜೋಗತಿ ಮತ್ತು ಬೆಳ್ಳಿ ಬೀದಿನಾಟಕಗಳು ಪ್ರದರ್ಶನಗೊಂಡವು. ಈ ನಾಟಕಗಳು ಜನರಲ್ಲಿ ಸಾಕ್ಷರತೆಯ ಅರಿವು, ಸಾಮಾಜಿಕ ಮೂಢನಂಬಿಕೆಗಳ ಬಗೆಗೆ ಪ್ರಜ್ಞೆ, ಪರಿಸರ ನೈರ್ಮಲ್ಯೀಕರಣದ ಬಗೆಗೆ ಅರಿವು, ಏಡ್ಸ್ ಜಾಗೃತಿ ಮತ್ತು ಮಹಿಳಾ ಸಮಸ್ಯೆಗಳ ಬಗೆಗೆ ಜನರಲ್ಲಿ ವೈಚಾರಿಕ ಪ್ರಜ್ಞೆಯನ್ನು ಮೂಡಿಸುವಲ್ಲಿ ತುಂಬಾ ಮಹತ್ವದಾಗಿದೆ.

ಕಳೆದ ಶತಮಾನದ ೭೦ರ ದಶಕದ ಮೊದಲ ಮತ್ತು ಮಧ್ಯಭಾಗದಲ್ಲಿ ಅನೇಕ ಜನಪರ, ಪ್ರಗತಿಪರ ಚಳವಳಿಗಳು ಹುರಿಗೊಳ್ಳುತ್ತಿದ್ದವು. ಬರಹಗಾರ ಒಕ್ಕೂಟ, ಸಮುದಾಯ, ದಲಿತ ಸಂಘರ್ಷ ಸಮಿತಿ ಮುಂತಾದ ಸಂಘಟನೆಗಳು ಜನಪರ ನಿಲುವಿನಿಂದ ವಿಶಾಲ ಜನಾಂದೋಲನಕ್ಕೆ ಪೂರ್ವಭಾವಿ ಭೂಮಿಕೆಯನ್ನು ನಿರ್ಮಿಸುವ ಹವಣಿಕೆಯಲ್ಲಿದ್ದವು. ಅವುಗಳಿಗೆ ಒಂದು ಸಶಕ್ತವಾದ ಹಾಗೂ ಮಾಧ್ಯಮದ ಅವಶ್ಯಕತೆ ಇತ್ತು. ಅಂದರೆ ಅಕ್ಷರ ಮಾಧ್ಯಮ, ಪತ್ರಿಕಾ ಮಾಧ್ಯಮ ಮತ್ತು ರೇಡಿಯೋ ಮಾಧ್ಯಮಗಳ ಮಿತಿಗಳನ್ನು ಮೀರಿ ಜನಪದರಿಗೆ ನೇರವಾಗಿ ತಲುಪಬಹುದಾಗಿದ್ದ ಒಂದು ಸಮರ್ಥ ಮಾಧ್ಯಮದ ಅನ್ವೇಷಣೆಯ ತುರ್ತು ಇತ್ತು. ಹಾಗೆಯೇ ಅಕ್ಷರಸ್ಥರು, ಅನಕ್ಷರಸ್ಥರು ಇಬ್ಬರಿಗೂ ಕಡಿಮೆ ಖರ್ಚಿನಲ್ಲಿ ಎಷ್ಟೋ ಸಲ ಖರ್ಚು ಇಲ್ಲದೆ ತಲುಪಬಹುದಾದ ಮಾಧ್ಯಮದ ಶೋಧನೆಯಲ್ಲಿದ್ದಾಗ ಸಹಜವಾಗಿಯೇ ಕೈಗೆ ಎಟುಕಿದ್ದು ಬೀದಿನಾಟಕ. ಹಾಗಾಗಿ, ಬೀದಿನಾಟಕ ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸುವ, ಜನಪರ ಹೋರಾಟಗಳಿಗೆ ಇಂಬುಗೊಡುವ, ಸ್ಥಾಪಿತ ಹಿತಾಸಕ್ತಿಯ ಮೌಲ್ಯ ಮತ್ತು ವ್ಯವಸ್ಥೆ ವಿರುದ್ಧದ ಪ್ರತಿಭಟನೆಗೆ ಜೀವತುಂಬುವ, ಅದರ ಮೊನಚು ಮತ್ತು ಪರಿಮಾಣವನ್ನು ನೂರ್ಮಡಿಗೊಳಿಸುವ ಸಂಕೀರ್ಣ ಪ್ರಕ್ರಿಯೆಗಳಿಂದಲೇ ಉದ್ಭವಿಸಿ ಬಂದದ್ದು, ಈಗ ಇತಿಹಾಸ ಸಂಗತಿ(ಹುಡಗಿ, ೨೦೦೫: ೦೬).

ಇಂದಿರಾಗಾಂಧಿಯ ಸರ್ವಾಧಿಕಾರಿ ಆಡಳಿತದ ೧೯೭೫ರ ತುರ್ತುಪರಿಸ್ಥಿತಿಯ ಹೇರಿಕೆ ಪ್ರಜಾತಂತ್ರ ರಾಷ್ಟ್ರವಾದ ಭಾರತಕ್ಕೊಂದು ಕರಾಳ ಅಧ್ಯಾಯ. ಜನರಿಗೆ ಸಂವಿಧಾನದ ಮೂಲಕ ಕೊಡಲಾಗಿದ್ದ ಸ್ವಾತಂತ್ರ್ಯ, ಸಮಾನತೆಯಂತಹ ಹಕ್ಕುಗಳಿಗೆ ಇದೊಂದು ಸಂಚಕಾರದ ಕಾಲ. ಆಗ ದೇಶಾದ್ಯಂತ ಪ್ರಜಾತಂತ್ರದ ಹರಣವನ್ನು ಪ್ರತಿಭಟಿಸಿ ಅನೇಕ ಚಳವಳಿಗಳು ಸಂಘಟಿತಗೊಂಡವು. ಅಂತಹ ಚಳವಳಿಗಳಲ್ಲಿ 'ಸಮುದಾಯ' ಚಳವಳಿ ಒಂದು. ಇಂತಹ ಚಳವಳಿಗಳು ರಾಯಚೂರು ಪ್ರದೇಶದಲ್ಲಿ ಜನರಲ್ಲಿ ಅರಿವನ್ನು ಮೂಡಿಸುವಲ್ಲಿ ಮಹತ್ವವಾಗಿವೆ.

ಕಳೆದ ೨೫ ವರ್ಷಗಳಿಂದ ಕರ್ನಾಟಕ ಸಾಂಸ್ಕೃತಿಕ ರಂಗದಲ್ಲಿ 'ಸಮುದಾಯ' ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ನೀಡುತ್ತಾ ಬಂದಿದೆ. 'ಕಲೆಗಾಗಿ ಕಲೆ' ಎನ್ನುವ ಸಾಂಪ್ರದಾಯಿಕ ತತ್ವ ಅಥವಾ ನಂಬಿಕೆಯನ್ನು ತಿರಸ್ಕರಿಸಿ 'ಬದುಕಿಗಾಗಿ ಕಲೆ' ಎನ್ನುವ ಉದ್ದೇಶದೊಂದಿಗೆ ಜನರ ಪರವಾಗಿ, ಜನರ ಕಾಳಜಿ ಸಲುವಾಗಿ ನಡೆಸುತ್ತಿದೆ. ಸಮುದಾಯ ಹೊಂದಿದ ಸಂಘಟನೆ ಕಲೆಯನ್ನು ಸಾಮೂಹಿಕವಾಗಿ, ಸಾಂಸ್ಕೃತಿಕ ಮಾಧ್ಯಮವನ್ನಾಗಿಸಿ ದೀನ ದಲಿತರ ಮತ್ತು ಎಲ್ಲ ಸೌಲಭ್ಯಗಳಿಂದ ವಂಚಿತರಾದ ಶೋಷಿತ ಜನತೆಯ ನೋವು ನಲಿವುಗಳೊಂದಿಗೆ ಬೆರೆತು, ಸಮಾಜದಲ್ಲಿರುವ ಮೌಢ್ಯತೆ, ಅಸಮಾನತೆ, ಜೀವ ವಿರೋಧಿ ಮೌಲ್ಯಗಳನ್ನು ಗಾಢವಾಗಿ ಪ್ರತಿಭಟಿಸಿ, ಪ್ರಗತಿಪರ ವೈಚಾರಿಕತೆಯನ್ನು ಬೆಳೆಸುವಲ್ಲಿ ಕಲೆಯು ಪ್ರಮುಖ ಪಾತ್ರವಹಿಸಿದೆ. ಸಮುದಾಯವು ರಾಯಚೂರು ಪ್ರದೇಶದಲ್ಲಿ ಹಿಂದುಳಿದ ಮತ್ತು ಕೆಳವರ್ಗಗಳ ಪರವಾಗಿ, ಬೀದಿನಾಟಕದ ಮುಖಾಂತರ ನೇರವಾಗಿ ಜನರಲ್ಲಿ ಪ್ರಭಾವ ಬೀರುವಂತಹ ಬೀದಿ ನಾಟಕಗಳನ್ನು ಆಡಿ ಗಮನ ಸೆಳೆದಿದೆ. ರಾಯಚೂರಿನ ಸಮುದಾಯವು ಕಳೆದ ಎರಡು ದಶಕಗಳಲ್ಲಿ

ಸಕ್ರಿಯವಾಗಿ ವಿಶ್ವಶಾಂತಿ, ಬರಗಾಲ ಮತ್ತು ಅಸ್ಪೃಶ್ಯತೆ, ದೇವದಾಸಿ ಪದ್ಧತಿ, ರೈತರ ಸಾವಿನ ಬಗ್ಗೆ ಇನ್ನೂ ಮುಂತಾದವುಗಳ ಬಗ್ಗೆ ನೇರವಾಗಿ ಜನರಲ್ಲಿ ಸಾಮಾಜಿಕ ಪ್ರಜ್ಞೆ ಬೀರುವಂತಹ ಬೀದಿ ನಾಟಕಗಳನ್ನು ಪ್ರದರ್ಶಿಸಿರುವುದನ್ನು ಕಾಣುತ್ತೇವೆ (ನಾಗಮೋತಿ, ೨೦೦೨: ೧೩).

ಸಫ್ದರ್ ಹಶ್ಮಿ ಅಪ್ರತಿಮ ವ್ಯಕ್ತಿತ್ವ, ಪ್ರತಿಭೆ, ಕಲಾಪ್ರೌಢಿಮೆ ಮೈಗೂಡಿಸಿಕೊಂಡ ಕಲಾವಿದ. ಈತ ಬೀದಿನಾಟಕಗಳ ಹರಿಕಾರನೆಂದೇ ಪ್ರಸಿದ್ಧಿ ಪಡೆದವನು. ಇವರು ರಂಗನಾಟಕ, ಬೀದಿನಾಟಕಗಳ ಮುಖಾಂತರ ಬಡವರ ಪರ, ಶ್ರೀಮಂತರ ವಿರುದ್ಧ, ಶೋಷಣೆ ಪರವಾಗಿ ಹಲವಾರು ಬೀದಿನಾಟಕಗಳನ್ನು ಮಾಡಿದ್ದಾರೆ. ಇವರ ಪ್ರಭಾವ ಕರ್ನಾಟಕದ ಮೇಲೆ ಬೀರಿತು. ಇಂತಹ ವ್ಯಕ್ತಿಯ ವ್ಯಕ್ತಿತ್ವದ ಛಾಯೆಗಳು ರಾಯಚೂರು ಪ್ರದೇಶದ ಮೇಲೆ ತನ್ನದೇ ಆದ ರೀತಿಯಲ್ಲಿ ಬಿದ್ದಿದ್ದನ್ನು ಕಾಣಬಹುದು (ನಾಗಮೋತಿ, ೨೦೦೨: ೨೭).

೧೯೩೩ರಲ್ಲಿ ಹುಟ್ಟಿಕೊಂಡ ಬೀದಿನಾಟಕ ಚಳವಳಿ ಈವತ್ತಿನ ಸ್ಥಿತಿಯಲ್ಲಿ ತುಂಬಾ ಮಹತ್ವವಾಗಿದೆ. ಇದರಲ್ಲಿ ಪ್ರಮುಖವಾಗಿ ಶ್ರೀಕಾಂತ ಕಕ್ಕೇರಿ, ಶರಣಮಾಲಿ ಪಾಟೀಲ್, ಡಿಂಗ್ರಿ ನರಸಪ್ಪ, ಹರಣಿ ಬಸವಪ್ರಭು, ತಾಯಣ್ಣ ಎರಗೇರಾ, ಮಲ್ಲಿಕಾರ್ಜುನ ಸಜ್ಜನ, ನರೇಂದ್ರ, ಅಮರೇಶ, ಶ್ರೀಧರ, ಶಾಮಾಲ್ ಪೂಜಾರ ಇನ್ನು ಮುಂತಾದವರು ಈ ರಾಯಚೂರು ಪ್ರದೇಶದಲ್ಲಿ ಬೀದಿನಾಟಕದ ಮುಖಾಂತರ ಜನರಲ್ಲಿ ಅರಿವು ಮೂಡಿಸಿದ್ದಾರೆ. ಬೀದಿ ನಾಟಕದ ಆಶಯಗಳು ಹೀಗಿವೆ.

೧. ಬೀದಿನಾಟಕ ಜನಪರ ಸಂಘಟನೆ, ಸಾಂಸ್ಕೃತಿಕ ಮತ್ತು ಸಂಘರ್ಷಶೀಲ ಮನೋಭೂಮಿಕೆಯನ್ನು ನಿರ್ಮಿಸುವಂಥದ್ದು.

೨. ಬೀದಿನಾಟಕ ಜನತೆಗೆ ಸರಳ ಮನರಂಜನೆ ನೀಡುವ ಒಂದು ಕಲಾತ್ಮಕ ರಂಗಕ್ರಿಯೆಯಾಗಿದೆ.

೩. ಬೀದಿನಾಟಕ ಜನರಲ್ಲಿ ಪ್ರತಿಭಟನೆಯ ಕಿಡಿ ಪ್ರಜ್ವಲಿಸುವಂತೆ ಮಾಡುತ್ತದೆ (ಹುಡಗಿ ಆರ್.ಕೆ., ೨೦೦೫: ೮).

'ಸಮುದಾಯ' ಸಂಘಟನೆ ಇಡೀ ರಾಯಚೂರು ಪ್ರದೇಶದ ತುಂಬೆಲ್ಲಾ ಸುತ್ತಾಡಿ ಜನರ ಪರವಾದ ಮತ್ತು ಸರ್ಕಾರ ನಡೆಸುತ್ತಿರುವ ಅನ್ಯಾಯದ ವಿರುದ್ಧ, ಸಾಮಾಜಿಕ ಶೋಷಣೆಯ ವಿರುದ್ಧ, ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯದ ವಿರುದ್ಧ ಜೊತೆಗೆ ದಲಿತರನ್ನು ಇಂದಿಗೂ ಕಾಡುತ್ತಿರುವ ಶೋಷಣೆ ವಿರುದ್ಧ ಹಲವಾರು ಬೀದಿನಾಟಕಗಳನ್ನು ಮಾಡಿದೆ.

ಸಮುದಾಯವು ರಾಯಚೂರಿನಲ್ಲಿ ೧೯೭೮ರಲ್ಲಿ ಪ್ರಾರಂಭವಾದ ನಂತರ ಪ್ರತಿಯೊಂದು ತಾಲೂಕಿನಲ್ಲಿ ಜನರಲ್ಲಿ ಬೀದಿ ನಾಟಕಗಳ ಮುಖಾಂತರ ಜಾಗೃತಿಯನ್ನು ಮೂಡಿಸಿದರು. ಇಲ್ಲಿ ಜನರಿಗೆ ಬೀದಿನಾಟಕವೆಂದರೆ ಕುತೂಹಲದ ವಿಷಯ. ಇದು ನಮ್ಮ ಸ್ಥಳದಲ್ಲಿ ಯಾವಾಗ ಇದೆ ಎಂದು ತಿಳಿಯುತ್ತಿದ್ದರು. ಅಷ್ಟರ ಮಟ್ಟಿಗೆ ಈ ಬೀದಿನಾಟಕ ಪಾತ್ರ ರಾಯಚೂರಲ್ಲಿ ಮಹತ್ವ ಪಡೆದಿದೆ. ನಾಡಿನಾದ್ಯಂತ ಕಾಲ ಕಾಲಕ್ಕೆ

ಜರುಗಿದ ಜನಜಾಗೃತಿಯ ಜಾಥಗಳೆಲ್ಲದರಲ್ಲಿ ಪಾಲ್ಗೊಂಡು ರಾಯಚೂರು ಸಮುದಾಯವು ರಾಜ್ಯದ ಕ್ರಿಯಾಶೀಲ ಘಟಕಗಳ ಪೈಕಿ ಅಗ್ರಗಣ್ಯಸ್ಥಾನ ಸಂಪಾದಿಸಿತು.

ಜನರ ಮಧ್ಯದಿಂದಲೇ ಹುಟ್ಟಿ ಬಂದ ಚಳವಳಿ ಈಗ ಮತ್ತೆ ಜನರ ಬಳಿಗೆ ಹೋಗುತ್ತಿರುವ ದೃಶ್ಯವನ್ನು ನಾವು ಕಾಣುತ್ತೇವೆ. ರಾಯಚೂರಿನಲ್ಲಿ ಸಮುದಾಯವು ಯಾವ ರೀತಿ ಪ್ರಭಾವ ಬೀರಿತು ಎಂಬುದನ್ನು ಈ ಕೆಳಗಿನಂತೆ ಕಾಣಬಹುದು (ಸಂದರ್ಶನ : ವಿಶ್ವನಾಥ ಎಸ್., ೨೪.೦೨.೨೦೦೭).[೨] ಈ ಬೀದಿನಾಟಕಗಳು ದಲಿತರಿಗೆ ಜಾಗೃತಿ ಮೂಡಿಸುವ ಕಾರ್ಯಕ್ರಮ, ಸಾಕ್ಷರತೆಯ ಆಂದೋಲನ, ಅನಿಷ್ಟಪದ್ಧತಿಗಳ ವಿರೋಧ, ಬೆಲ್ಚಿನಾಟಕ ಮತ್ತು ಮಹಿಳಾ ಪರವಾದ ಬೀದಿನಾಟಕಗಳನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

## ದಲಿತರಲ್ಲಿ ಜಾಗೃತಿ ಮೂಡಿಸುವುದು

ರಾಯಚೂರು ಪ್ರದೇಶದಲ್ಲಿ ಇಂದಿಗೂ ಕೂಡ ಮೇಲ್ವರ್ಗ ಜಾತಿಗಳ ಕಾಲ್ತುಳಿತಕ್ಕೆ ಒಳಗಾದ ದಲಿತರು ಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಅಲ್ಲದೇ ಇವರಲ್ಲಿ ಅತಿ ಹೆಚ್ಚಾಗಿ ಬಡತನ, ಅನಕ್ಷರತೆ, ನಿರುದ್ಯೋಗದಂತಹ ಹಲವಾರು ಮೂಲಭೂತ ಸಮಸ್ಯೆಗಳಿವೆ. ಇಂತಹ ಸಮಸ್ಯೆಗಳ ಸಂಕೋಲೆಯಲ್ಲಿ ಸಿಲುಕಿರುವ ದಲಿತರಲ್ಲಿ ಜಾಗೃತಿ ಮೂಡಿಸುವುದಕ್ಕಾಗಿ ಪ್ರತಿಯೊಂದು ಹಳ್ಳಿಯಲ್ಲಿ ಬೀದಿನಾಟಕಗಳನ್ನು ಪ್ರದರ್ಶಿಸಲಾಗಿದೆ. ಜೊತೆಗೆ ಅನಿಷ್ಟ ಸಂಪ್ರದಾಯಗಳ ಕುರಿತಂತೆ ಇವರಲ್ಲಿ ಅರಿವು ಮೂಡಿಸುವಲ್ಲಿ ಈ ಬೀದಿನಾಟಕಗಳ ಪಾತ್ರ ತುಂಬಾ ಮಹತ್ವದ ಪ್ರಭಾವ ಬೀರಿದೆ ಎಂದು ಹೇಳಬಹುದು.

೧೯೭೮ರಲ್ಲಿ ರಾಯಚೂರಿನಲ್ಲಿ 'ರಂಗ ಸಮುದಾಯ' ಮತ್ತು 'ದಲಿತ ಕಲಾ ಮಂಡಳಿ'ಗಳೂ ಜನ್ಮ ತಾಳಿದವು. ಜನಸಾಮಾನ್ಯರನ್ನು ಸಂಘಟಿಸಲು ಹಳ್ಳಿ ಹಳ್ಳಿಗಳಿಗೆ, ಬೀದಿ ಬೀದಿಗಳಿಗೆ, ಕೊಳಗೇರಿಗಳಿಗೆ ಹೋಗಿ ಜನರಲ್ಲಿ ಜಾಗೃತಿ ಮೂಡಿಸಲು ಹೋರಾಟದ ಹಾಡುಗಳನ್ನು ಹಾಡುತ್ತಿದ್ದರು.

ಬರುತಿಹೆವು ನಾವು ಬರುತಿಹೆವು
ಬರುತಿಹೆವು ನಾವು ಬರುತಿಹೆವು
ಯುಗ ಯುಗಗಳಿಂದ ನೀವು ತುಳಿದ
ಜನಗಳ ಕೊರಳ ದನಿಗಳು ನಾವು
ಎಲ್ಲಿಂದ ಬಂದಿರೆಂದು ಕೇಳಬಹುದು ನೀವು
ಜನರ ನಡುವಿನಿಂದ ಎಂದು ಹೇಳುತ್ತೇವೆ ನಾವು
ಈ ನಾಡ ಮಣ್ಣಿನಲ್ಲಿ ಮಣ್ಣಾದ ಜನಗಳ ಕಥೆಯ
ಕಥೆಯೊಂದು ಹೇಳತೀನಿ ಸಾರಿ ಸಾರಿ ಹೇಳತೀನಿ
ಕಿವಿಗೊಟ್ಟು ಕೇಳಿರಣ್ಣಾ ನೋವಿನ ರಾಗವನ್ನು...

ಒಂಟಿ ಒಂಟಿ ಬದುಕು ಸಾಕು
ಒಗ್ಗಟ್ಟು ಆಗಬೇಕು (ನಾಗಮೋತಿ, ೨೦೦೨ : ೩೫).

ದಲಿತರಲ್ಲಿ ಈ ಹಾಡುಗಳನ್ನು ಹಾಡುವ ಮುಖಾಂತರ ಅವರಲ್ಲಿ ಜಾಗೃತಿ ಮೂಡಿಸುತ್ತಿದ್ದರು (ಸಂದರ್ಶನ : ವಿಶ್ವನಾಥ ಎಸ್., ೨೪.೦೨.೨೦೦೭). ಜಿಲ್ಲೆಯ ಪ್ರತಿ ತಾಲೂಕು, ಪ್ರತಿ ಹಳ್ಳಿ, ಹಳ್ಳಿಗೆ ಹೋಗಿ ಹಳ್ಳಿಯ ಗೌಡರ ಮನೆ ಮುಂದೆ ಹಲಗೆಯಿಂದ ಡಂಗುರ ಸಾರಿ ಬೀದಿ ಬೀದಿಗಳಲ್ಲಿ ನಾಟಕಗಳ ಮುಖಾಂತರ ಜೀತಪದ್ಧತಿ, ಅಸ್ಪೃಶ್ಯತೆ, ಅನಕ್ಷರತೆ ಹಾಗೂ ದಿನನಿತ್ಯ ಜನರ ಮೇಲೆ ನಡೆಯುತ್ತಿರುವ ದೌರ್ಜನ್ಯದ ವಿರುದ್ಧ ಬೀದಿನಾಟಕ ಮಾಡುತ್ತಿದ್ದರು.

ಜನಸಾಮಾನ್ಯರಲ್ಲಿ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯ ತಿಳಿವಳಿಕೆಯನ್ನು ನೀಡಲು ಅನೇಕ ರೀತಿಯ ಬೀದಿನಾಟಕಗಳನ್ನು ಮಾಡಿ ದಲಿತರಲ್ಲಿ ಜಾಗೃತಿ ಮೂಡಿಸುವಲ್ಲಿ ರಾಯಚೂರು ಸಮುದಾಯ ಮುಂದಿರುವುದನ್ನು ನಾವು ನೋಡಬಹುದು (ಸಂದರ್ಶನ : ವಿಶ್ವನಾಥ ಎಸ್., ೨೪.೦೨.೨೦೦೭).

ಹೀಗೆ ಈ ಬೀದಿನಾಟಕಗಳು ಜಡ್ಡುಗಟ್ಟಿದ ದಲಿತರ ಜೀವನದಲ್ಲಿ ಒಂದು ಹೊಸ ಸಾಮಾಜಿಕ ವ್ಯವಸ್ಥೆಯನ್ನೆ ಹುಟ್ಟು ಹಾಕುವಲ್ಲಿ ಯಶಸ್ವಿಯಾದವು. ಇವರಲ್ಲಿ ಸ್ವಾಭಿಮಾನ ಜೀವನ, ಹೋರಾಟ ಮನೋಭಾವನೆ ಮತ್ತು ನಿರುದ್ಯೋಗದ ಅರಿವು ಮೂಡಿಸುವಲ್ಲಿ ಈ ಬೀದಿನಾಟಕಗಳ ಪಾತ್ರ ಅನನ್ಯವಾದದು.

**ಬೀದಿನಾಟಕಗಳ ಮುಖಾಂತರ ಸಾಕ್ಷರತೆ ಆಂದೋಲನ**

ಹಿಂದುಳಿದ ಜಿಲ್ಲೆ ಎಂದು ಹೆಸರಾಗಿರುವ ರಾಯಚೂರು ಪ್ರದೇಶವು ಹೆಚ್ಚು ಗ್ರಾಮಗಳನ್ನು ಹೊಂದಿದೆ. ಇಲ್ಲಿ ಅನಕ್ಷರತೆಯು ಬಲವಾದ ಸಮಸ್ಯೆಯಾಗಿದೆ. ಆದುದರಿಂದ ಈ ಪ್ರದೇಶದ ಗ್ರಾಮೀಣ ಜನರಲ್ಲಿ ಅಕ್ಷರ ಜ್ಞಾನವನ್ನು ಮೂಡಿಸಿ ಅವರನ್ನು ಸಾಕ್ಷರರನ್ನಾಗಿ ಮಾಡುವ ಸಲುವಾಗಿ ಬೀದಿ ನಾಟಕಗಳನ್ನು ಪ್ರದರ್ಶಿಸುವ ಮುಖಾಂತರ ಪ್ರಯತ್ನಿಸಿರುವುದು ಮುಖ್ಯವಾಗಿದೆ.

ರಾಯಚೂರು ಪ್ರದೇಶದಲ್ಲಿ ಈ ಸಮುದಾಯವು ಬೀದಿನಾಟಕಗಳ ಮುಖಾಂತರ ಸಾಕ್ಷರತೆಯ ಪ್ರಗತಿ ಸಾಧಿಸಿದ್ದಾರೆ. ಇವರು ಸರ್ಕಾರದ ಪರವಾನಾಗಿಯಲ್ಲಿ ಜಿಲ್ಲೆಯ ಪ್ರತಿಯೊಂದು ಪ್ರದೇಶದಲ್ಲಿ ಪ್ರತಿಯೊಬ್ಬರು ಸಾಕ್ಷರತೆಯನ್ನು ಪಡೆಯಬೇಕು. ಸಾಕ್ಷರತೆ ಇಲ್ಲದವರನ್ನು ಇಂದು ಸಮಾಜ ಬೇರೆ ರೀತಿಯಲ್ಲಿ ನೋಡುತ್ತದೆ. ಆದುದರಿಂದ ಪ್ರತಿ ಜಾಗಕ್ಕೆ ತಲುಪಿಸಲು, ಅನಕ್ಷರತೆ ಹೋಗಲಾಡಿಸಲು ಸಾಕ್ಷರತೆ ಅರಿವು ಮೂಡಿಸುತ್ತಿದ್ದರು (ಸಂದರ್ಶನ : ವಿಶ್ವನಾಥ ಎಸ್., ೨೪.೦೨.೨೦೦೭).

ರಾಯಚೂರು ಪ್ರದೇಶ ಹಿಂದುಳಿದ ಕಾರಣ ಇಲ್ಲಿನ ಜನರಿಗೆ ಬೀದಿನಾಟಕದ ಮೂಲಕ ಮನೋರಂಜನೆ ಕಾರ್ಯಕ್ರಮ ನೀಡಿ, ಅವರನ್ನು ಆಕರ್ಷಣೆ ಮಾಡಿ ಸಾಕ್ಷರತೆಯ ಬಗ್ಗೆ ಜನರಲ್ಲಿ ಅರಿವು ಮೂಡಿಸಿರುವುದು ವಿಶೇಷವಾಗಿದೆ (ಸಂದರ್ಶನ : ವಿಶ್ವನಾಥ ಎಸ್., ೨೪.೦೨.೨೦೦೭).

೧೯೯೧-೯೨ರಲ್ಲಿ ಪ್ರಾರಂಭವಾದ ಈ ಸಾಕ್ಷರತೆ ಗುಣಮಟ್ಟವು ಶೇಕಡ ೩೫ ಇದ್ದದ್ದು, ಈಗ ಶೇಕಡ ೪೮ ಪ್ರಗತಿಯನ್ನು ಕಂಡಿದೆ. ಇದಕ್ಕೆ ಈ ಬೀದಿನಾಟಕಗಳ ಪ್ರಭಾವ ಕಾರಣವಾಗಿದೆ. ಈ ಬೀದಿನಾಟಕಗಳು ಭಾರತದಲ್ಲಿ ಅತಿ ಹೆಚ್ಚು ಸಾಕ್ಷರತೆಗೆ ಒತ್ತುಕೊಟ್ಟಿರುವುದನ್ನು ಮತ್ತು ಕರ್ನಾಟಕದಲ್ಲಿ ಅದೇ ರೀತಿ ರಾಯಚೂರು ಪ್ರದೇಶದಲ್ಲಿ ಬೀದಿನಾಟಕಗಳ ಮುಖಾಂತರ ಸಾಕ್ಷರತೆಯ ಪ್ರಗತಿಯನ್ನು ಕಂಡಿರುವುದನ್ನು ಕಾಣುತ್ತೇವೆ (ಸಂದರ್ಶನ : ವಿಶ್ವನಾಥ ಎಸ್., ೨೪.೦೨.೨೦೦೭).

ಹೀಗೆ ಸಮೂಹವು ಬೀದಿನಾಟಕಗಳನ್ನು ಪ್ರದರ್ಶಿಸುವ ಮೂಲಕ ಜನರಲ್ಲಿ ಜಾಗೃತಿ ಮೂಡಿಸಿ, ಅವರಲ್ಲಿ ವೈಚಾರಿಕ ಪ್ರಜ್ಞೆಯನ್ನು ಬೆಳೆಸಿರುವುದು ಮಹತ್ವದ್ದಾಗಿದೆ.

## ಸಮಾಜದಲ್ಲಿನ ಅನಿಷ್ಟ ಪದ್ಧತಿಗಳ ವಿರೋಧ

ಭಾರತವು ೨೧ನೇ ಶತಮಾನಕ್ಕೆ ಕಾಲಿಟ್ಟರೂ ಸಮಾಜದ ಅನಿಷ್ಟಪದ್ಧತಿಗಳಿಂದ ಮತ್ತು ಸಾಂಪ್ರದಾಯಿಕ ಆಚರಣೆಗಳಿಂದ ಇನ್ನೂ ಬಿಡುಗಡೆ ಹೊಂದಿಲ್ಲ. ಇದನ್ನು ತೊಡೆದು ಹಾಕಲು ಇನ್ನಷ್ಟು ಪ್ರವಾದಿಗಳು ಹಾಗೂ ಸಾಮಾಜಿಕ ಸುಧಾರಕರು ಜನಿಸಿ ಬಂದರೂ ಸಾಧ್ಯವಿಲ್ಲವೆಂಬಂತಾಗಿದೆ. ಬೀದಿನಾಟಕದವರು ಹಲವಾರು ಕಾರ್ಯ ಯೋಜನೆಗಳನ್ನು ಹಮ್ಮಿಕೊಂಡು ಇಂಥ ಅನಿಷ್ಟಪದ್ಧತಿಗಳು ತೊಡೆದು ಹಾಕುವಲ್ಲಿ ಸಮಾಜದ ಮೇಲೆ ಸ್ವಲ್ಪಮಟ್ಟಿಗೆ ಪ್ರಭಾವ ಬೀರಿದ್ದಾರೆ ಎಂದರೆ ತಪ್ಪಾಗಲಾರದು. ಈ ನಾಟಕ ತಂಡಗಳು ದೇವದಾಸಿ ಪದ್ಧತಿ, ಬಾಲ್ಯವಿವಾಹ, ಅಸ್ಪೃಶ್ಯತೆ, ಜಾತಿಪದ್ಧತಿ ಮತ್ತು ಜೀತಪದ್ಧತಿಗಳಂಥ ಅನಿಷ್ಟಪದ್ಧತಿ ಕುರಿತಂತೆ ಜನರಲ್ಲಿ ಅರಿವು ಮೂಡಿಸುವಲ್ಲಿ ಪ್ರಮುಖ ಪಾತ್ರ ವಹಿಸಿವೆ.



ಬೀದಿನಾಟಕದಲ್ಲಿ ಸಮಾಜದ ಅನಿಷ್ಟ ಪದ್ಧತಿಗಳ ಬಗ್ಗೆ ತಿಳುವಳಿಕೆಯ ಹಾಡುಗಳು

ಬೀದಿನಾಟಕವು ತುಂಬಾ ಮಹತ್ವ ಕಾರ್ಯಕ್ರಮಗಳನ್ನು ಮಾಡುತ್ತದೆ. ಇಂದಿಗೂ ರಾಯಚೂರು ಪ್ರದೇಶದಲ್ಲಿ ಅನಿಷ್ಟ ಪದ್ಧತಿಗಳಾದ ದೇವದಾಸಿ ಪದ್ಧತಿ, ಬಾಲ್ಯವಿವಾಹ ಪದ್ಧತಿ, ಅಸ್ಪೃಶ್ಯತೆ ಮತ್ತು ಮೂಢನಂಬಿಕೆ ಮುಂತಾದವುಗಳ ವಿರುದ್ಧ ಬೀದಿನಾಟಕಗಳ ಮುಖಾಂತರ ಪ್ರದರ್ಶನ ನೀಡಿರುವುದನ್ನು ಕಾಣುತ್ತೇವೆ.

ರಾಯಚೂರಿನ ಸೋಮವಾರಪೇಟೆಯಲ್ಲಿ ಜೋಗತಿ ನಾಟಕ ಮಾಡಲಾಯಿತು. ಈ ನಾಟಕದಲ್ಲಿ ವಿಶೇಷವಾಗಿ ದೇವದಾಸಿ ಬಿಡಬಾರದು, ವೇಶ್ಯಾವಾಟಿಕೆ ನಡೆಸಬಾರದು ಎಂಬ ತಿಳುವಳಿಕೆಯನ್ನು ನೀಡಿ, ಸೂಚನೆಗಳನ್ನು ನೀಡಿ, ಪ್ರದರ್ಶನದ ಮುಖಾಂತರ ಅವರಿಗೆ ಜ್ಞಾನಾರ್ಜನೆ ನೀಡುತ್ತಿದ್ದರು. ಹಿಂದುಳಿದ ಜಾತಿಯಲ್ಲಿ ಅತಿಹೆಚ್ಚಾಗಿ ದೇವದಾಸಿಯರನ್ನು ಬಿಡುತ್ತಿದ್ದರು. ಅಸ್ಪೃಶ್ಯತೆ ಒಂದು ಪಿಡುಗಾದರೆ ಅದರ ಜೊತೆಯಲ್ಲಿ ದೇವದಾಸಿಯೂ ಒಂದು ಪಿಡುಗಾಗಿತ್ತು. ಬಡತನ ಅವರ ಬೆನ್ನಿಗೆ ಇದ್ದ ಕಾರಣ ಹಿಂದಿನ ಸಂಪ್ರದಾಯದಂತೆ ದಲಿತರಲ್ಲಿ ದೇವದಾಸಿಯರನ್ನು ಬಿಡುತ್ತಿದ್ದರು. ಇಂದೂ ದೇವದಾಸಿ ಪದ್ಧತಿ ಸ್ವಲ್ಪಮಟ್ಟಿಗೆ ಕಡಿಮೆ ಇರಲೂ ಕಾರಣ ಇದು. ಬೀದಿನಾಟಕದ ಪಾತ್ರ ಎಂದು ಹೇಳಬಹುದು (ಸಂದರ್ಶನ : ವಿಶ್ವನಾಥ ಎಸ್., ೨೪.೦೨.೨೦೦೭).

## ಬೆಲ್ಚಿ ನಾಟಕದ ಪಾತ್ರ

ನಮ್ಮ ದೇಶದಲ್ಲಿ ೨೦ನೇ ಶತಮಾನದ ಪೂರ್ವಾರ್ಧದಲ್ಲಿ ಪೌರಾಣಿಕ ಮತ್ತು ಐತಿಹಾಸಿಕ ನಾಟಕಗಳು ಪ್ರದರ್ಶಿತವಾಗುತ್ತಿದ್ದವು. ನಾಟಕಗಳ ಕಥಾವಸ್ತುಗಳು ಹೆಚ್ಚಾಗಿ ಪವಿತ್ರ, ಅಪವಿತ್ರ, ಸತ್ಯ ಮತ್ತು ಅಸತ್ಯ ಪಾಪಪುಣ್ಯಗಳ ಸುತ್ತ ಹೆಣೆಯಲ್ಪಟ್ಟಿದ್ದವು. ಅದರಂತೆ ಸಾಮಾಜಿಕ ನಾಟಕಗಳೂ ಪೌರಾಣಿಕ ನಾಟಕಗಳಷ್ಟೇ ಮಹತ್ವವನ್ನು ಪಡೆದಿವೆ. ಅದರಲ್ಲಿ ಬೀದಿನಾಟಕಗಳ ಪಾತ್ರ ಪ್ರಮುಖವಾಗಿದೆ. ಬೀದಿನಾಟಕಗಳು ಸಾಮಾಜಿಕ ಕಳಕಳಿಯನ್ನು ಬಿಂಬಿಸುವಂಥ ವಿಷಯವನ್ನು ಪ್ರಧಾನವಾಗಿಸಿಕೊಂಡು ಹಳ್ಳಿಗಳಲ್ಲಿ ಪ್ರದರ್ಶಿಸುತ್ತಾರೆ. ಅದರಲ್ಲಿ 'ಬೆಲ್ಚಿ' ನಾಟಕ ತಂಡ ಅತ್ಯಂತ ಪ್ರಮುಖವಾಗಿದೆ. ಈ ತಂಡದ ಉದ್ದೇಶ ಜನರಲ್ಲಿ ಮೂಢನಂಬಿಕೆ ಮತ್ತು ಅಸ್ಪೃಶ್ಯತೆ ಬಗೆಗೆ ಅರಿವು ಮೂಡಿಸುವುದಾಗಿದೆ. ಹೀಗಾಗಿ ಈ ತಂಡ ರಾಜ್ಯಮಟ್ಟದಲ್ಲಿಯೂ ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡು ಬಂದಿದೆ.

ರಾಯಚೂರು ಪ್ರದೇಶದಲ್ಲಿ ಬೆಲ್ಚಿ ನಾಟಕವು ತುಂಬಾ ಮಹತ್ವ ಬೀರಿದ ನಾಟಕ ಏಕೆಂದರೆ ಬೆಲ್ಚಿ ನಾಟಕದಲ್ಲಿ ಕಾರ್ಮಿಕರ ನೋವುಗಳು ಮತ್ತು ನರಗುಂದ ರೈತ ಹೋರಾಟಗಳು ಸಾವು-ನೋವುಗಳ ಬಗ್ಗೆ ತಿಳಿಸುತ್ತದೆ.

ಕಾರ್ಮಿಕರ ಸ್ಥಿತಿಗತಿಯ ಈ ಬೀದಿನಾಟಕವನ್ನು ಹಟ್ಟಿ ಚಿನ್ನದ ಗಣಿಯಲ್ಲಿ ಮಾಡಿ ಜನರಲ್ಲಿ ಅರಿವು ಮೂಡಿಸಿದೆ. ಅಲ್ಲದೇ ನರಗುಂದ ರೈತ ಹೋರಾಟದಲ್ಲಿ ೧೨೦ ಜನ ಗೋಲಿಬಾರ್ ನಲ್ಲಿ ಮರಣ ಹೊಂದಿದರ ಬಗ್ಗೆ ಈ ಬೀದಿನಾಟಕವು ನೇರವಾದ ವಿಷಯವನ್ನು ತಿಳಿಸುತ್ತದೆ. ಇದರ

ಪರಿಣಾಮವಾಗಿ ರೈತರಲ್ಲಿ ಮತ್ತು ಕಾರ್ಮಿಕರಲ್ಲಿ ತಮ್ಮ ನೋವುಗಳನ್ನು ಈ ಬೀದಿನಾಟಕಗಳ ಮುಖಾಂತರ ತಿಳಿಸಿದ್ದೇವೆ. ಇದೊಂದು ರಾಯಚೂರು ಪ್ರದೇಶದಲ್ಲಿ ಕಂಡಂತ ಪ್ರಮುಖ ಬೀದಿನಾಟಕವಾಗಿದೆ (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯.೦೨.೨೦೦೭).

**ಮಹಿಳಾ ಪರವಾದ ಬೀದಿನಾಟಕ**

ಭಾರತವು ಆಧುನೀಕರಣ, ಜಾಗತಿಕರಣ, ಕೈಗಾರಿಕೀರಣ ಎಷ್ಟೇ ಪ್ರಗತಿ ಸಾಧಿಸಿದರೂ, ಮಹಿಳೆಯರು ಇನ್ನೂ ಪುರುಷಪ್ರಧಾನ ವ್ಯವಸ್ಥೆಯಿಂದ ಹೊರಬರಲು ಸಾಧ್ಯವಾಗಿಲ್ಲ. ಅದರಲ್ಲೂ ಜಿಲ್ಲೆಯ ಮಹಿಳೆಯರ ಸ್ಥಿತಿಗತಿಗಳನ್ನು ಅವಲೋಕಿಸಿದಾಗ ನಮ್ಮ ಭಾರತೀಯ ಸಾಮಾಜಿಕ ವ್ಯವಸ್ಥೆಯು ಪ್ರಾಚೀನ ಸಾಂಪ್ರದಾಯಿಕ ಪದ್ಧತಿಯ ವ್ಯವಸ್ಥೆಯಲ್ಲಿ ಮುಂದುವರೆಯುತ್ತಿರುವುದು ಕಂಡುಬರುತ್ತದೆ.

ಇಂದು ಯಾವುದೇ ಪ್ರದೇಶದಲ್ಲಿ ಕಂಡರೂ ಮಹಿಳೆಯು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯವಾಗಿ ಶೋಷಣೆಗೆ ಒಳಪಟ್ಟಿದ್ದಾಳೆ. ರಾಯಚೂರು ಪ್ರದೇಶವು ಕೂಡ ಮಹಿಳೆಯರ ಶೋಷಣೆ ಯಿಂದ ಹೊರತಾಗಿಲ್ಲ. ಆದುದರಿಂದ ಮಹಿಳೆಯ ಪರವಾಗಿ ಕೆಲವು ಬೀದಿನಾಟಕಗಳನ್ನು ಮಾಡಿದ್ದಾರೆ.

ಅಲ್ಲಮನ ಅದ್ಭುತ ನ್ಯಾಯ ಎಂಬ ಬೀದಿನಾಟಕದಲ್ಲಿ ಮಹಿಳೆ ಕೇವಲ ಮಗು ಹೆರುವ ಯಂತ್ರವಲ್ಲ, ಅದರ ಜೊತೆಗೆ ಇಲ್ಲಿ ಮಹಿಳೆ ಸಾಮಾಜಿಕ, ರಾಜಕೀಯ ಕ್ಷೇತ್ರದಲ್ಲಿ ಇನ್ನೂ ಗಣನೀಯ ಸಾಧನೆ ಮಾಡುವವಳು ಎಂಬುದರ ಬಗ್ಗೆ ತಿಳಿಸಿದ್ದಾರೆ (ನಾಗಮೋತಿ, ೨೦೦೨ : ೩೩).

ಅಲ್ಲದೇ ಈ ಪ್ರದೇಶದಲ್ಲಿ ವರದಕ್ಷಿಣೆ ಪಿಡುಗು ಇದ್ದು ಈ ಪಿಡುಗನ್ನು ಹೋಗಲಾಡಿಸಲು ಬೀದಿನಾಟಕ ಪ್ರಮುಖ ಪಾತ್ರ ವಹಿಸಿದೆ. ಕುದುರೆಮೋತಿ ಹೋರಾಟ, ಜಾಲಹಳ್ಳಿ ಕ್ಯಾಂಪಿನ ವರದಕ್ಷಿಣೆ ವಿರುದ್ಧ ಹೋರಾಟ, ಅಶ್ಲೀಲ ಭಿತ್ತಿಚಿತ್ರಗಳ ವಿರುದ್ಧ ನಡೆದ ಮಹಿಳಾ ಹೋರಾಟ ಹಾಗೂ ಚಳವಳಿಗಳಲ್ಲಿ ಬೀದಿನಾಟಕವು ಸಕ್ರಿಯವಾಗಿ ಭಾಗವಹಿಸಿ ಬೆಂಬಲಿಸಿದೆ. ಇದು ಮಹಿಳೆ ಪರವಾದ ಬೀದಿನಾಟಕಗಳು (ಸಂದರ್ಶನ : ಮಲ್ಲಯ್ಯ ಜಾಲಹಳ್ಳಿ, ೧೯.೦೨.೨೦೦೭).

## ಸಮೂಹ ಚಳವಳಿ(ಸರ್ಕಾರೇತರ ಸಂಸ್ಥೆಗಳು ಮತ್ತು ಸಮುದಾಯ ಅಭಿವೃದ್ಧಿ ಚಳವಳಿ)

ಸಮೂಹ ಚಳವಳಿ ಈಗ ಕರ್ನಾಟಕದಲ್ಲಿ ಬೆಂಗಳೂರು ನಗರ, ರಾಯಚೂರು (ಕೊಪ್ಪಳ) ಜಿಲ್ಲೆ, ಗದಗ ಮತ್ತು ಹಾವೇರಿ, ಉತ್ತರ ಕನ್ನಡ ಜಿಲ್ಲೆಗಳಲ್ಲಿ ಕಾರ್ಯನಿರತವಾಗಿದೆ. ಅದರಂತೆ ನಮ್ಮ ರಾಯಚೂರು ಜಿಲ್ಲೆಯಲ್ಲಿ 'ಸಮೂಹ' ಹಲವಾರು ಯೋಜನೆಗಳೊಂದಿಗೆ ಕಾರ್ಯನಿರತವಾಗಿದೆ. ಏಕೆಂದರೆ ರಾಯಚೂರು ಜಿಲ್ಲೆಯ ಅತಿ ಹಿಂದುಳಿದ ತಾಲೂಕು ದೇವದುರ್ಗಕ್ಕೆ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದ ಹಣಕಾಸಿನ ನೆರವು ದೊರೆತಿದೆ. ಈ ಪ್ರದೇಶದಲ್ಲಿ ಸಮೂಹವು ತನ್ನ ಪಾತ್ರವನ್ನು ಯಶಸ್ವಿಯಾಗಿ ನಿರ್ವಹಿಸುತ್ತದೆ (ಸಮೂಹ ವಾರ್ಷಿಕ ವರದಿ, ೨೦೦೫: ೪).

ಸಮೂಹ ಒಂದು 'ಸಾಂಸ್ಕೃತಿಕ ಪದ' ಸಮೂಹ ಅಂದರೆ ಒಂದು ಗುಂಪು. ಗುಂಪಿನ ಜನ ಅಭಿವೃದ್ಧಿಯಲ್ಲಿ ತೊಡಗುತ್ತಿರುವುದರ ಜೊತೆಗೆ ಹಿಂದುಳಿದ ಪ್ರದೇಶದ ಅಭಿವೃದ್ಧಿಗೆ ಒತ್ತು ನೀಡುವುದೇ ಈ ಸಮೂಹದ ಪ್ರಮುಖ ಕಾರ್ಯವಾಗಿದೆ. ಇಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪ್ರತಿಯೊಬ್ಬರೂ ಸಮೂಹ ಯೋಜನೆಗಳನ್ನು ಅನುಷ್ಠಾನಗೊಳಿಸುವ ಗುರಿಯನ್ನು ಹೊಂದಿದ್ದಾರೆ.

'ಸಮೂಹ'ದ ಮೂಲಕ ರಾಯಚೂರು ಪ್ರದೇಶದಲ್ಲಿ ಹಲವಾರು ಸಣ್ಣ ಪುಟ್ಟ ಸಂಸ್ಥೆಗಳು ಇದ್ದು, ಇವು ಹಲವಾರು ಯೋಜನೆಗಳನ್ನು ಹಾಕಿಕೊಂಡಿವೆ. ಸಮಗ್ರ ಗ್ರಾಮೀಣಾಭಿವೃದ್ಧಿ, ಅಂಗವಿಕಲತೆಯ ಸುಧಾರಣೆ, ಭೂ ಅಭಿವೃದ್ಧಿ, ಏಡ್ಸ್ ಜಾಗೃತಿ ಕಾರ್ಯಕ್ರಮ, ಮುಂಜಾವು ಮಹಿಳಾ ಸಹಕಾರಿ ಸಂಘ ಮತ್ತು ಸ್ಲಂ ಜನಾಂಗಗಳ ಅಭಿವೃದ್ಧಿ ಕುರಿತು ಈ ಕೆಳಗಿನಂತೆ ಚರ್ಚಿಸಲಾಗಿದೆ.

೧. ಸಮಗ್ರ ಗ್ರಾಮೀಣ ಅಭಿವೃದ್ಧಿ
೨. ಅಂಗವಿಕಲತೆ ಸುಧಾರಣೆ
೩. ಭೂ ಅಭಿವೃದ್ಧಿ
೪. ಎಚ್ಐವಿ ಪೀಡಿತರಿಗೆ ತಿಳಿವಳಿಕೆ ಕಾರ್ಯಕ್ರಮ
೫. ಮುಂಜಾವು ಮಹಿಳಾ ಸಹಕಾರಿ ಸಂಘ
೬. ಸ್ಲಂ ಜನಗಳ ಅಭಿವೃದ್ಧಿ

ಇವೆಲ್ಲ ಸಮೂಹಗಳನ್ನು ಸಮಾಜದಲ್ಲಿ ಅಭಿವೃದ್ಧಿ ಮಾಡುವುದರ ಜೊತೆಗೆ ಇದನ್ನು ಸಾಮಾಜಿಕ ಚಳವಳಿ ರೂಪದಲ್ಲಿ ನೋಡುವುದು.

ಇಲ್ಲಿ ರಾಯಚೂರು ಸಮೂಹದ ನಿರ್ದೇಶಕರಾದ ಕೆ.ಪ್ರದೀಪ್ ಮತ್ತು ಸಂಘಟನಾ ಸಂಯೋಜಕರಾದ ಎಸ್.ಎಸ್.ಘಂಟಿ ಅವರು ರಾಯಚೂರು ಪ್ರದೇಶದ ಸಮೂಹ ಯೋಜನೆಗಳನ್ನು ಮಾಡುತ್ತಿರುವುದನ್ನು ನೋಡಬಹುದು (ಸಂದರ್ಶನ : ಘಂಟಿ ಎಸ್.ಎಸ್., ೦೪.೦೬.೨೦೦೭).[೩] ರಾಯಚೂರು ಪ್ರದೇಶದಲ್ಲಿ ಸಮೂಹದ ಪಾತ್ರ ಮತ್ತು ಕಾರ್ಯಕ್ರಮಗಳ ಬಗ್ಗೆ ಈ ಕೆಳಗಿನಂತೆ ಪರಿಶೀಲಿಸಬಹುದು.

## ಸಮಗ್ರ ಗ್ರಾಮೀಣ ಅಭಿವೃದ್ಧಿ

ಕಳೆದ ಐದು ದಶಕಗಳಲ್ಲಿ ಅಭಿವೃದ್ಧಿಯ ಕಾರ್ಯಗಳು ಗ್ರಾಮೀಣ ಭಾಗದ ಜನರ ಸಮಸ್ಯೆಯನ್ನು ನಿವಾರಿಸುವಲ್ಲಿ ವಿಫಲಗೊಂಡಿದ್ದು, ಹಲವು ಸಮಸ್ಯೆಗಳ ಆಗರವಾಗಿಯೇ ಉಳಿದುಕೊಂಡಿದೆ. ಬಡತನ, ನಿರುದ್ಯೋಗ ಮತ್ತು ಅನಕ್ಷರತೆಯಂತಹ ಮೂಲಭೂತ ಸಮಸ್ಯೆಗಳು ಗ್ರಾಮೀಣ ಭಾರತ ಎದುರಿಸುತ್ತಿರುವ ಗಂಭೀರ ಸಮಸ್ಯೆಗಳಾಗಿವೆ. ಸಂಪತ್ತು ಗ್ರಾಮೀಣ ಪ್ರದೇಶಗಳಲ್ಲಿ ಉತ್ಪತ್ತಿಯಾಗುತ್ತಿದ್ದರೂ ಇಲ್ಲಿನ ಸಂಪತ್ತು ಕೇಂದ್ರ ಪ್ರದೇಶಕ್ಕೆ ಹರಿದು ಹೋಗುತ್ತಿದೆ ಹೊರತು, ಗ್ರಾಮೀಣ ಪ್ರದೇಶಕ್ಕೆ ಯಾವುದೇ ಲಾಭ

ಸಮೂಹ ಒಂದು 'ಸಾಂಸ್ಕೃತಿಕ ಪದ' ಸಮೂಹ ಅಂದರೆ ಒಂದು ಗುಂಪು. ಗುಂಪಿನ ಜನ ಅಭಿವೃದ್ಧಿಯಲ್ಲಿ ತೊಡಗುತ್ತಿರುವುದರ ಜೊತೆಗೆ ಹಿಂದುಳಿದ ಪ್ರದೇಶದ ಅಭಿವೃದ್ಧಿಗೆ ಒತ್ತು ನೀಡುವುದೇ ಈ ಸಮೂಹದ ಪ್ರಮುಖ ಕಾರ್ಯವಾಗಿದೆ. ಇಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪ್ರತಿಯೊಬ್ಬರೂ ಸಮೂಹ ಯೋಜನೆಗಳನ್ನು ಅನುಷ್ಠಾನಗೊಳಿಸುವ ಗುರಿಯನ್ನು ಹೊಂದಿದ್ದಾರೆ.

'ಸಮೂಹ'ದ ಮೂಲಕ ರಾಯಚೂರು ಪ್ರದೇಶದಲ್ಲಿ ಹಲವಾರು ಸಣ್ಣ ಪುಟ್ಟ ಸಂಸ್ಥೆಗಳು ಇದ್ದು, ಇವು ಹಲವಾರು ಯೋಜನೆಗಳನ್ನು ಹಾಕಿಕೊಂಡಿವೆ. ಸಮಗ್ರ ಗ್ರಾಮೀಣಾಭಿವೃದ್ಧಿ, ಅಂಗವಿಕಲತೆಯ ಸುಧಾರಣೆ, ಭೂ ಅಭಿವೃದ್ಧಿ, ಏಡ್ಸ್ ಜಾಗೃತಿ ಕಾರ್ಯಕ್ರಮ, ಮುಂಜಾವು ಮಹಿಳಾ ಸಹಕಾರಿ ಸಂಘ ಮತ್ತು ಸ್ಲಂ ಜನಾಂಗಗಳ ಅಭಿವೃದ್ಧಿ ಕುರಿತು ಈ ಕೆಳಗಿನಂತೆ ಚರ್ಚಿಸಲಾಗಿದೆ.

೧. ಸಮಗ್ರ ಗ್ರಾಮೀಣ ಅಭಿವೃದ್ಧಿ

೨. ಅಂಗವಿಕಲತೆ ಸುಧಾರಣೆ

೩. ಭೂ ಅಭಿವೃದ್ಧಿ

೪. ಎಚ್ಐವಿ ಪೀಡಿತರಿಗೆ ತಿಳಿವಳಿಕೆ ಕಾರ್ಯಕ್ರಮ

೫. ಮುಂಜಾವು ಮಹಿಳಾ ಸಹಕಾರಿ ಸಂಘ

೬. ಸ್ಲಂ ಜನಗಳ ಅಭಿವೃದ್ಧಿ

ಇವೆಲ್ಲ ಸಮೂಹಗಳನ್ನು ಸಮಾಜದಲ್ಲಿ ಅಭಿವೃದ್ಧಿ ಮಾಡುವುದರ ಜೊತೆಗೆ ಇದನ್ನು ಸಾಮಾಜಿಕ ಚಳವಳಿ ರೂಪದಲ್ಲಿ ನೋಡುವುದು.

ಇಲ್ಲಿ ರಾಯಚೂರು ಸಮೂಹದ ನಿರ್ದೇಶಕರಾದ ಕೆ.ಪ್ರದೀಪ್ ಮತ್ತು ಸಂಘಟನಾ ಸಂಯೋಜಕರಾದ ಎಸ್.ಎಸ್.ಘಂಟಿ ಅವರು ರಾಯಚೂರು ಪ್ರದೇಶದ ಸಮೂಹ ಯೋಜನೆಗಳನ್ನು ಮಾಡುತ್ತಿರುವುದನ್ನು ನೋಡಬಹುದು (ಸಂದರ್ಶನ : ಘಂಟಿ ಎಸ್.ಎಸ್., ೦೪.೦೬.೨೦೦೭).[೩] ರಾಯಚೂರು ಪ್ರದೇಶದಲ್ಲಿ ಸಮೂಹದ ಪಾತ್ರ ಮತ್ತು ಕಾರ್ಯಕ್ರಮಗಳ ಬಗ್ಗೆ ಈ ಕೆಳಗಿನಂತೆ ಪರಿಶೀಲಿಸಬಹುದು.

## ಸಮಗ್ರ ಗ್ರಾಮೀಣ ಅಭಿವೃದ್ಧಿ

ಕಳೆದ ಐದು ದಶಕಗಳಲ್ಲಿ ಅಭಿವೃದ್ಧಿಯ ಕಾರ್ಯಗಳು ಗ್ರಾಮೀಣ ಭಾಗದ ಜನರ ಸಮಸ್ಯೆಯನ್ನು ನಿವಾರಿಸುವಲ್ಲಿ ವಿಫಲಗೊಂಡಿದ್ದು, ಹಲವು ಸಮಸ್ಯೆಗಳ ಆಗರವಾಗಿಯೇ ಉಳಿದುಕೊಂಡಿದೆ. ಬಡತನ, ನಿರುದ್ಯೋಗ ಮತ್ತು ಅನಕ್ಷರತೆಯಂತಹ ಮೂಲಭೂತ ಸಮಸ್ಯೆಗಳು ಗ್ರಾಮೀಣ ಭಾರತ ಎದುರಿಸುತ್ತಿರುವ ಗಂಭೀರ ಸಮಸ್ಯೆಗಳಾಗಿವೆ. ಸಂಪತ್ತು ಗ್ರಾಮೀಣ ಪ್ರದೇಶಗಳಲ್ಲಿ ಉತ್ಪತ್ತಿಯಾಗುತ್ತಿದ್ದರೂ ಇಲ್ಲಿನ ಸಂಪತ್ತು ಕೇಂದ್ರ ಪ್ರದೇಶಕ್ಕೆ ಹರಿದು ಹೋಗುತ್ತಿದೆ ಹೊರತು, ಗ್ರಾಮೀಣ ಪ್ರದೇಶಕ್ಕೆ ಯಾವುದೇ ಲಾಭ

ಉಂಟಾಗಿಲ್ಲ. ಹೀಗಾಗಿ ಈ ಒಂದು ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದಂತಹ ಯೋಜನೆಗಳನ್ನು ಸಮೂಹ ಅಭಿವೃದ್ಧಿ ರೂಪಿಸುತ್ತಿದೆ.

ಭಾರತವು ಅತಿ ಹೆಚ್ಚು ಗ್ರಾಮಗಳನ್ನು ಹೊಂದಿರುವ ದೇಶ. ಮಹಾತ್ಮ ಗಾಂಧೀಜಿಯವರ ಅಂದಿನ ಕನಸು ಗ್ರಾಮೀಣ ಅಭಿವೃದ್ಧಿ ಮಾಡುವುದೇ ಆಗಿತ್ತು. ಇಂತಹ ಪ್ರೇರಣ ಅಂಶಗಳು ಸಮೂಹಗಳಲ್ಲಿ ಇಂದು ಗ್ರಾಮೀಣ ಪ್ರದೇಶಕ್ಕೆ ಹೆಚ್ಚು ಒತ್ತು ನೀಡಲಾಗಿದೆ.

ಗ್ರಾಮೀಣ ಪ್ರದೇಶದಲ್ಲಿ ಸಾಕ್ಷರತೆಗೆ ಸಮೂಹ ಆದ್ಯತೆ ನೀಡಿದೆ. ಅಕ್ಷರ ಜ್ಞಾನ ಮುಟ್ಟಿಸುವಲ್ಲಿ ಸಮೂಹ ಪ್ರಮುಖ ಪಾತ್ರ ವಹಿಸಿದೆ. ಇಂದು ಸಮೂಹದಿಂದ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾರ್ಥಿಗಳು ಶಾಲೆಗಳಲ್ಲಿ ಪ್ರವೇಶ ಮಾಡಿರುವುದನ್ನು ನಾವು ಕಾಣುತ್ತೇವೆ. ಜೊತೆಗೆ ಆರೋಗ್ಯ ಮತ್ತು ನೀರು ಶುದ್ಧೀಕರಣದ ಬಗ್ಗೆ ಹೆಚ್ಚು ಮಹತ್ವ ನೀಡಲಾಗಿದೆ. ಸಮೂಹದವರು "ನೀರು ಶುದ್ಧೀಕರಣವಿದ್ದರೆ ಆರೋಗ್ಯ ಶುದ್ಧೀಕರಣವಿರುತ್ತದೆ" ಎಂಬ ಹೇಳಿಕೆ ನೀಡಿ ಆರೋಗ್ಯಕ್ಕೆ ಬೇಕಾದ ಎಲ್ಲ ಸಲಹೆಗಳನ್ನು ಜನಸಮೂಹಕ್ಕೆ ನೀಡಿದೆ ಎಂದು ಹೇಳಬಹುದು. ಸ್ವಚ್ಛತೆ ಜೊತೆಗೆ ರೋಗ ನಿರೋಧಕ ಚುಚ್ಚು ಮದ್ದು, ಹೆಚ್.ಐ.ವಿ. ತಡೆಗಟ್ಟಲು ಚಿಕಿತ್ಸಾ ಕೇಂದ್ರಗಳನ್ನು ಏರ್ಪಡಿಸಿರುವುದನ್ನು ಗ್ರಾಮೀಣ ಪ್ರದೇಶದಲ್ಲಿ ನಾವು ಕಾಣುತ್ತೇವೆ. ಇದೇ ರೀತಿ ಸಮೂಹ ಗ್ರಾಮೀಣ ಅಭಿವೃದ್ಧಿಗೆ ಒತ್ತು ನೀಡಲಾಗಿದೆ.

### ಅಂಗವಿಕಲತೆ ಸುಧಾರಣೆ

ಅಂಗವಿಕಲತೆ ಒಂದು ಸಾಮಾಜಿಕ ಪಿಡುಗಾಗಿ ಕಾಡುತ್ತಿದೆ. ಬಡತನ ರೇಖೆಗಿಂತ ಕೆಳಗಿರುವ ಜನರಿಗೆ ವಿಕಾಲಂಗತೆಯು ಒಂದು ಜ್ವಲಂತ ಸಮಸ್ಯೆಯಾಗಿ ಕಾಡುತ್ತಿದೆ. ಪೋಷಕರು ತಮ್ಮ ಮಕ್ಕಳಿಗೆ



ಅಂಗವಿಕಲರಿಗೆ ಆರೋಗ್ಯ ಸೌಲಭ್ಯ ನೀಡುತ್ತಿರುವುದು

ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟಿದೆ. ಪ್ರಸ್ತುತ ಸಂದರ್ಭದಲ್ಲಿ ಈ ಸಮೂಹವು ರಾಯಚೂರು ಪ್ರದೇಶದಲ್ಲಿ ಆರೋಗ್ಯ ಅಭಿವೃದ್ಧಿಯ ನಿಯಮದಂತೆ ಅಂಗವಿಕಲತೆ ಸುಧಾರಣೆ ಮಾಡುತ್ತಿದೆ. ಅಂಗವಿಕಲತೆಯ ಚಿಕಿತ್ಸೆ ಮತ್ತು ಆಯುರ್ವೇದಿಕ್ ಚಿಕಿತ್ಸೆ ನೀಡಿ ಅವರ ಆರೋಗ್ಯವನ್ನು ಸುಧಾರಣೆಗೆ ತರುವುದು ಮತ್ತು ಅವರ ಆರೋಗ್ಯಕ್ಕೆ ಬೇಕಾದ ಎಲ್ಲ ಸೌಲಭ್ಯಗಳನ್ನು ಮತ್ತು ಹಣಕಾಸಿನ ವ್ಯವಸ್ಥೆಯನ್ನು ಸಮೂಹ ನೀಡುತ್ತದೆ. ಜೊತೆಗೆ ಅಂಗವಿಕಲತೆ ತಡೆಗಟ್ಟುವ ಬಗ್ಗೆ ಕಾರ್ಯಕ್ರಮಗಳನ್ನು ಹಾಕಿಕೊಂಡು, ಅಂಗವಿಕಲರನ್ನು ಜೀವನದಲ್ಲಿ ಪುನಶ್ಚೇತನ ಮಾಡುವುದು, ಇವರಿಗೆ ಬೇಕಾದ ಎಲ್ಲಾ ಸೌಲಭ್ಯವನ್ನು ಒದಗಿಸಿಕೊಡುವುದು ಸಮೂಹ ಯೋಜನೆಯಾಗಿದೆ. ಅಂಗವಿಕಲರ ಬಾಳಿನ ಬೆಳಕಾಗಿ ಈ ಸಮೂಹದ ಕಾರ್ಯನಿರ್ವಹಿಸುತ್ತಿದೆ ಎಂದು ಹೇಳಬಹುದು (ಸಮೂಹ ವಾರ್ಷಿಕ ವರದಿ, ೨೦೦೫ : ೧೦). ಒಟ್ಟಿನಲ್ಲಿ ಈ ಸಮೂಹವು ಅಂಗವಿಕಲತೆಯನ್ನು ತಡೆಗಟ್ಟುವಲ್ಲಿ ಅತ್ಯಂತ ಮಹತ್ವದ ಯೋಜನೆಗಳನ್ನು ರೂಪಿಸಿ ಅವರಿಗೆ ಮಾನಸಿಕ ಸ್ಥೈರ್ಯ ಮತ್ತು ಉಚಿತ ಶಿಕ್ಷಣ ವ್ಯವಸ್ಥೆಯನ್ನು ಮಾಡುತ್ತಿದೆ.

## ಭೂ ಅಭಿವೃದ್ಧಿ

ಭಾರತವು ಕೃಷಿ ಪ್ರಧಾನ ದೇಶವಾಗಿದ್ದರಿಂದ ಆದಾಯದ ಅಸಮಾನತೆಯನ್ನು ತಗ್ಗಿಸಲು ಭೂ ಅಭಿವೃದ್ಧಿ ಅಥವಾ ಭೂ ಸುಧಾರಣೆ ಜಾರಿಗೆ ತರಲಾಯಿತು. ಬರಡು ಭೂಮಿಗೆ ಬೋರ್ ಮತ್ತು ಬಾವಿಗಳ ವ್ಯವಸ್ಥೆಯನ್ನು ಕಲ್ಪಿಸುವುದರೊಂದಿಗೆ ಭೂಮಿಯ ಫಲವತ್ತತೆಯನ್ನು ಹೆಚ್ಚಿಸುವುದು, ಬಡ ರೈತರಿಗೆ ಸಾಲವನ್ನು ನೀಡುವುದರ ಮೂಲಕ ಭೂ ಅಭಿವೃದ್ಧಿಪಡಿಸಿಕೊಳ್ಳಲು ಈ ಸಂಸ್ಥೆಯು ದುಡಿಯುತ್ತಿದೆ.



ನೀರಿನ ಬಳಕೆಯ ಬಗ್ಗೆ ತರಬೇತಿ

ಹೊಲದಲ್ಲಿ ಬಾವಿ ತೋಡಿಸುವ ಸಲುವಾಗಿ ಸಮೂಹದವರು ಬ್ಯಾಂಕಿನಲ್ಲಿ ಸಾಲ ಮಂಜೂರಾತಿ ಮಾಡಿಸುತ್ತಾರೆ ಮತ್ತು ಬೋರ್‌ವೆಲ್‌ಗೆ ಕೂಡ ಬ್ಯಾಂಕ್ ಸಾಲ ನೀಡುವಂತೆ ಮಾಡುತ್ತಾರೆ. ಜೊತೆಗೆ ನೀರಿನ ಬಳಕೆಯನ್ನು ಯಾವ ರೀತಿ ಮಾಡಬೇಕು ಎಂಬುದು ಮತ್ತು ಭೂಮಿಯ ಫಲವತ್ತತೆಯನ್ನು ಕಂಡುಕೊಳ್ಳಲು ಸಮೂಹ ಕೆಲವು ಯೋಜನೆಗಳನ್ನು ನೀಡಿ ರೈತರ ಭೂ ಅಭಿವೃದ್ಧಿ ಪಡಿಸುತ್ತದೆ.

## ಏಡ್ಸ್ ಜಾಗೃತಿ ತಿಳಿವಳಿಕೆ ಕಾರ್ಯಕ್ರಮ

ಭಾರತದಲ್ಲಿ ಏಡ್ಸ್ ರೋಗವು ಇಂದು ಸಾಮಾಜಿಕ ಪಿಡುಗಾಗಿ ಕಾಡುತ್ತಿದೆ. ಅಲ್ಲದೇ ಇದೊಂದು ಯಾವುದೇ ವೈದ್ಯಕೀಯ ಔಷಧಗಳಿಂದ ಗುಣಪಡಿಸಲಾಗದಂತಹ ಭಯಂಕರ ರೋಗವಾಗಿದೆ. ಇದು



**ಸಾರ್ವಜನಿಕ ಸ್ಥಳಗಳಲ್ಲಿ ಹೆಚ್.ಐ.ವಿ.(ಏಡ್ಸ್)ಬಗ್ಗೆ ಪ್ರಚಾರ**

ಪ್ರಪಂಚದ ಮುಂದುವರೆದ ರಾಷ್ಟ್ರಗಳಲ್ಲಿಯೂ ಕಂಡುಬರುತ್ತದೆ. ವಿಶ್ವಸಂಸ್ಥೆಯು ಏಡ್ಸ್ ರೋಗವನ್ನು ತಡೆಗಟ್ಟಲು ವೈಜ್ಞಾನಿಕವಾಗಿ ಮುಂಜಾಗ್ರತೆ ಕ್ರಮಗಳನ್ನು ರೂಪಿಸಿದೆ.

ಇಂದು ಹೆಚ್.ಐ.ವಿ ಎಂಬ ಭಯಾನಕ ರೋಗಕ್ಕೆ ಇಡೀ ಯುವಕರ ತಂಡವೇ ಬಲಿಯಾಗುತ್ತಿದೆ. ಇಂತಹ ತೊಂದರೆಗಳನ್ನು ಮನಗೊಂಡ ಸಮೂಹವು ಇಡೀ ವಿಶ್ವದಾದ್ಯಂತ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ವಿಶ್ವಸಂಸ್ಥೆ ಇದಕ್ಕೆ ಬಹಳಷ್ಟು ನೆರವು ನೀಡುತ್ತಿದೆ. ಭಾರತ ಪ್ರಪಂಚದ ೨ನೇ ಅತಿ ಹೆಚ್ಚು ಹೆಚ್.ಐ.ವಿ ಪೀಡಿತರನ್ನು ಹೊಂದಿದ ದೇಶವಾಗಿದೆ. ಈ ಹಿನ್ನೆಲೆಯಲ್ಲಿ ರಾಯಚೂರು ಪ್ರದೇಶಕ್ಕೆ ಬರುವ ಪ್ರತಿಕ್ಷೇತ್ರದಲ್ಲಿ ಹೆಚ್.ಐ.ವಿ. ಇರುವ ರೋಗಿಗಳನ್ನು ಕಂಡುಹಿಡಿದು ಅವರಿಗೆ ಮನಸ್ಥೈರ್ಯ ತುಂಬುವುದಲ್ಲದೆ, ಏಡ್ಸ್ ಇದ್ದರೂ ಕೂಡ ಈಗ ನೀವು ಬಾಳಬಹುದು ಎಂಬ ಧೈರ್ಯವನ್ನು ಈ ಸಂಸ್ಥೆ ತುಂಬುತ್ತದೆ. ಏಡ್ಸ್ ಯಾವ ರೀತಿಯಾಗಿ ಬರುತ್ತದೆ. ಬರದೆ ಇರುವುದಕ್ಕೆ ಯಾವ ಕ್ರಮ ಕೈಗೊಳ್ಳಬೇಕು ಎನ್ನುವ ಅರಿವನ್ನು ಮೂಡಿಸುವಲ್ಲಿ ಸಮೂಹ ಅತಿಪ್ರಮುಖವಾದ ಸಮೂಹ ಕಾರ್ಯ

ನಿರ್ವಹಿಸುತ್ತದೆ ಎಂದು ಹೇಳಬಹುದು (ಸಮೂಹ ವಾರ್ಷಿಕ ವರದಿ, ೨೦೦೫ : ೪). ದೇಶದಲ್ಲಿ ಹಲವಾರು ಸಂಘಸಂಸ್ಥೆಗಳು, ಮಹಿಳಾ ಸಂಘಟನೆಗಳು, ಚಲನಚಿತ್ರ ತಾರೆಯರು ಈ ಕುರಿತಂತೆ ಜನರಲ್ಲಿ ಜಾಗೃತಿ ಮೂಡಿಸಲು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದನ್ನು ಕಾಣುತ್ತೇವೆ. ಈ ಮೂಲಕ ಯುವಕ ಯುವತಿಯರಿಗೆ ಈ ಏಡ್ಸ್ ರೋಗವನ್ನು ತಡೆಗಟ್ಟುವಲ್ಲಿ ಮುಂಜಾಗ್ರತೆಮ ಕ್ರಮಗಳ ಬಗ್ಗೆ ಸಮೂಹವು ಜನರಲ್ಲಿ ಅರಿವು ಮೂಡಿಸುತ್ತದೆ.

### ಮುಂಜಾವು ಮಹಿಳಾ ಸಹಕಾರ ಸಂಘ

ಸಮೂಹದ ಅನೇಕ ಪ್ರಗತಿಪರ ಯೋಜನೆಗಳಲ್ಲಿ ಮಹಿಳಾ ಯೋಜನೆಯೂ ಒಂದಾಗಿದೆ. ಇಲ್ಲಿ ಅನೇಕ ಮಹಿಳೆಯರಿಗೆ ಸಾಕ್ಷರತೆ, ಉದ್ಯೋಗ ಖಾತ್ರಿ ಯೋಜನೆ ಮತ್ತು ಏಡ್ಸ್ ಜಾಗೃತಿಯ ಬಗ್ಗೆ, ಗರ್ಭಿಣಿಯರ ಬಗ್ಗೆ ಸಹಾಯ ಮತ್ತು ತರಬೇತಿ ಕಾರ್ಯಕ್ರಮಗಳನ್ನು ಮುಂಜಾವು ಮಹಿಳಾ ಸಹಕಾರ ಸಂಘದ ಮೂಲಕ ನಡೆಸುತ್ತಿದೆ. ಈ ಸಮೂಹವು ಪ್ರಸ್ತುತವಾಗಿ ಕೂಡ ಹಲವು ಸೌಲಭ್ಯಗಳನ್ನು ಒದಗಿಸಿಕೊಡುವಲ್ಲಿ ಸಮೂಹದ ಪಾತ್ರ ಮುಖ್ಯವಾಗಿದೆ.

ಈ ಸಂಘಕ್ಕೆ ಸಮೂಹ ಮಹಿಳೆಯರ ಆರೋಗ್ಯ, ಶಿಕ್ಷಣ ಮತ್ತು ಬೌದ್ಧಿಕ ಜೀವನವು ಇಂದು ಹೇಗೆ ಮಾಡಬೇಕು, ಅಲ್ಲದೆ ಅವರಿಗೆ ಸ್ವಸಹಾಯ ಗುಂಪುಗಳ ಮುಖಾಂತರ ಹಣ ನೀಡಿ ಅವರನ್ನು ವ್ಯಾಪಾರಕ್ಕೆ ಮಿಶನ್ ಮತ್ತು ಅವರ ಜೀವನದ ಉದ್ಯೋಗಕ್ಕೆ ಆರ್ಥಿಕ ಮತ್ತು ಸಾಮಾಜಿಕ ನೆರವು ನೀಡುತ್ತದೆ. ಇದು ಸಮೂಹದ ಮಹಿಳಾ ಅಭಿವೃದ್ಧಿಯ ಕಾರ್ಯಕ್ರಮವಾಗಿದೆ. ಈ ಸಂಘ ಮಹಿಳಾ ಪ್ರಗತಿಪೂರಕವಾಗಿದೆ. ಮಹಿಳೆಯರ ಆರೋಗ್ಯದ ಬಗ್ಗೆ ಹೆಚ್ಚು ಸೌಲಭ್ಯವನ್ನು ನೀಡುತ್ತದೆ. ಮಹಿಳೆಯರು ಪುರುಷರಷ್ಟೇ ಸಮಾನರು, ಪುರುಷರಂತೆ ನೀವು ಕೂಡ ಎಲ್ಲ ಕಾರ್ಯಕ್ರಮಗಳನ್ನು ಮಾಡಬಹುದು ಎಂದು ಅವರಲ್ಲಿ ಮನಸ್ಥೈರ್ಯ ತುಂಬುವ ಯೋಜನೆಗಳನ್ನು ನೀಡುತ್ತದೆ. ಈ ಸಂಘವು ಮಹಿಳೆಯರನ್ನು ಒಂದು ಉತ್ತಮ ಜೀವನಕ್ಕಾಗಿ ಎಲ್ಲ ವ್ಯವಸ್ಥೆ ಮಾಡಿದೆ ಎಂದು ಹೇಳಬಹುದು (ಸಂದರ್ಶನ : ಘಂಟಿ ಎಸ್.ಎಸ್., ೦೪.೦೬.೨೦೦೭).

### ಸ್ಲಂ ಜನಾಂಗ ಅಭಿವೃದ್ಧಿ

ಮಾನವನ ಜೀವನದಲ್ಲಿ ಅತ್ಯಂತ ಕ್ರೂರವಾದದ್ದು ಬಡತನ. ಇಲ್ಲಿ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವಾಗಿ ಏನು ಪಡೆಯದೇ ಸ್ಲಂ ಸ್ಥಳದಲ್ಲಿ ವಾಸಿಸುತ್ತಿರುವುದರ ಬಗ್ಗೆ ಈ ಸಮೂಹವು ಅಧ್ಯಯನ ನಡೆಸಿದೆ. ಅಲ್ಲದೇ ಅವರಿಗೆ ವಸತಿ ಸೌಲಭ್ಯ, ನೀರು ಸೌಲಭ್ಯ ಮತ್ತು ಸುವ್ಯವಸ್ಥಿತವಾದ ಜೀವನ ನಡೆಸುವುದಕ್ಕೆ ಆಶಯ ತೋರಿಸಿದ್ದೇ ಈ ಸಮೂಹ ಎಂದು ಹೇಳಬಹುದು.

ರಾಯಚೂರು ಪ್ರದೇಶದಲ್ಲಿ ಸ್ಲಂ ಜನರು ಅತಿ ಹೆಚ್ಚಾಗಿ ಬೆಂಗಳೂರು ನಗರದಲ್ಲಿ ವಾಸಿಸುತ್ತಿದ್ದಾರೆ. ಅಂತವರಿಗೆ ರಾಯಚೂರು ಪ್ರದೇಶದ ಜನರಲ್ಲಿ ಅಲ್ಲಿ ಸ್ಲಂನಲ್ಲಿ ವಾಸಿಸುತ್ತಿರುವವರಿಗೆ ಅವರಿಗೆ ಅಲ್ಲಿ

ಸ್ಲಂನಲ್ಲಿ ಒಂದು ವ್ಯವಸ್ಥೆ ಮಾಡಲು ಸಮೂಹ ಪ್ರಯತ್ನಿಸುತ್ತದೆ. ಏಕೆಂದರೆ ಅವರು ಬಹಳ ಹೊಲಸಾದ ಪ್ರದೇಶದಲ್ಲಿ ಇರುವುದರಿಂದ ಅವರಿಗೆ ಸರ್ಕಾರದ ವತಿಯಿಂದ ಜನರ ಜೀವನಕ್ಕಾಗಿ ಮನೆಗಳನ್ನು ನೀಡಲು ಸಮೂಹ ಸಂಸ್ಥೆಯು ಸರ್ಕಾರದ ಮೇಲೆ ಒತ್ತಡ ತಂದು ಅವರಿಗೆ ಮನೆಗಳನ್ನು ನೀಡಲು ಯಶಸ್ವಿಯಾಗಿದೆ. ಈ ಸಮೂಹದಿಂದ ಸ್ಲಂ ಜನರು ಸ್ವಲ್ಪಮಟ್ಟಿಗಾದರೂ ನಿಟ್ಟುಸಿರು ಬಿಡುವಂತಾಗಿದೆ (ಸಂದರ್ಶನ : ಘಂಟಿ ಎಸ್.ಎಸ್., ೪.೦೬.೨೦೦೭).

ಮೇಲಿನ ಎಲ್ಲ ಅಂಶಗಳನ್ನು ನೋಡಿದಾಗ ಸಮೂಹವು ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಗ್ರಾಮೀಣ ಪ್ರದೇಶದ ಜನರನ್ನು ಉತ್ತಮಪಡಿಸುವಲ್ಲಿ ಮಹತ್ವದ ಪಾತ್ರವಹಿಸಿರುವುದು ಕಂಡುಬರುತ್ತದೆ. ಈಗಲೂ ಸಮೂಹವು ಇಡೀ ರಾಜ್ಯದಲ್ಲಿ ತನ್ನ ಯಶಸ್ಸನ್ನು ಕಂಡಂತೆ ರಾಯಚೂರು ಪ್ರದೇಶದಲ್ಲಿ ಕೂಡ ಹಲವು ಯೋಜನೆಗಳನ್ನು ಹಾಕಿಕೊಂಡು ಯಶಸ್ವಿಯಾಗಿರುವುದನ್ನು ಕಾಣಬಹುದು.

ಮೇಲೆ ವಿವರಿಸಿದ ಚಳವಳಿಗಳು ರಾಯಚೂರು ಪ್ರದೇಶದಲ್ಲಿ ಹಮ್ಮಿಕೊಂಡ ಕಾರ್ಯಗಳ ಬಗ್ಗೆ ಮತ್ತು ಈ ಚಳವಳಿಗಳು ಜನರ ಮೇಲೆ ಬೀರಿದ ಪರಿಣಾಮಗಳ ಬಗ್ಗೆ ತಿಳಿಸುತ್ತದೆ. ಈ ಚಳವಳಿಯಿಂದ ಕೆಲವೊಂದು ಕೆಲಸ ಕಾರ್ಯಗಳಾಗಿವೆ. ಅಲ್ಲದೆ ಭೂಮಿ ಇಲ್ಲದವರಿಗೆ ಭೂಮಿ ಸಿಕ್ಕಿದೆ, ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡಲಾಗಿದೆ. ಈ ಸಾಮಾಜಿಕ ಚಳವಳಿಗಳು ಸಮಾಜದ ಮೇಲೆ ಪರಿಣಾಮ ಬೀರಿವೆ ಎಂದು ಹೇಳಬಹುದು.

ಟಿಪ್ಪಣಿಗಳು

೧. ಬಸಪ್ಪನವರು ರಾಯಚೂರು ಪ್ರದೇಶದ ಭಿನ್ನವಾದ ಆಯಾಮದಲ್ಲಿ ಗುರುತಿಸಿಕೊಂಡಿದ್ದಾರೆ. ಕರ್ನಾಟಕದಲ್ಲಿ ಹಿಂದುಳಿದ ಜಿಲ್ಲೆಯಾದ ರಾಯಚೂರು ಪ್ರದೇಶದ ಜನಸಮುದಾಯಕ್ಕೆ ಮುಖ್ಯವಾಗಿ ಅಕ್ಷರದ ಅರಿವು ಅಗತ್ಯವೆಂದು ಮನಗಂಡು ಸಾಕ್ಷರತಾ ಆಂದೋಲನದಲ್ಲಿ ತೊಡಗಿಸಿಕೊಂಡಿದ್ದಾರೆ (ಹೆಚ್ಚಿನ ವಿವರಗಳಿಗೆ ಅನುಬಂಧವನ್ನು ನೋಡಿ, ಪು.೧೧೧).

೨. ರಾಯಚೂರು ಪ್ರದೇಶದ ಜನಸಮುದಾಯಗಳ ತೊರೆತ ಮಾನಸಿಕ ಬದಲಾವಣೆಯನ್ನು ಬೀದಿ ನಾಟಕಗಳ ಮೂಲಕ ಬದಲಾಯಿಸಲು ಸಾಧ್ಯವಿದೆ ಎಂದು ಎಸ್.ವಿಶ್ವನಾಥ ಮನಗಂಡಿದ್ದಾರೆ. ಈ ಮುಖಾಂತರ ಸಾಮಾಜಿಕ ಬದಲಾವಣೆಗಾಗಿ, ನವೀನ ಮಾದರಿಯಲ್ಲಿ ಅರಿವು ಮೂಡಿಸುವಲ್ಲಿ ಶ್ರಮಿಸುತ್ತಿರುವ ವ್ಯಕ್ತಿಗಳಲ್ಲಿ ವಿಶ್ವನಾಥ ಕೂಡ ಒಬ್ಬರು (ಹೆಚ್ಚಿನ ವಿವರಗಳಿಗೆ ಅನುಬಂಧವನ್ನು ನೋಡಿ, ಪು.೧೧೨).

೩. ಮಾನಸಿಕ ಆರೋಗ್ಯದ ಜೊತೆಗೆ ದೈಹಿಕ ಆರೋಗ್ಯವು ಕೂಡ ಜನತೆಯ ಮೇಲೆ ಪ್ರಭಾವ ಬೀರುತ್ತದೆ ಎಂದು ಮನಗಂಡು ಆರೋಗ್ಯ ಯೋಜನೆಗಳ ಕುರಿತು ಶ್ರಮಿಸುತ್ತಿರುವಲ್ಲಿ ಎಸ್.ಎಸ್.ಘಂಟಿ ಅವರು ಒಬ್ಬರು. ಆ ಯೋಜನೆಗಳ ಮುಖಾಂತರ ರಾಯಚೂರು ಅಭಿವೃದ್ಧಿಗೆ ಶ್ರಮಿಸುತ್ತಿದ್ದಾರೆ (ಹೆಚ್ಚಿನ ವಿವರಗಳಿಗೆ ಅನುಬಂಧವನ್ನು ನೋಡಿ, ಪು.೧೧೨).

ಕರ್ನಾಟಕದಮಟ್ಟಿಗೆ ಚಳವಳಿಗೆ ಸಂಬಂಧಪಟ್ಟ ಅಥವಾ ಚಳವಳಿಗಳ ಚರಿತ್ರೆಗೆ ಸಂಬಂಧಪಟ್ಟ ಬರವಣಿಗೆಗಳು ಸೀಮಿತವಾಗಿವೆ. ಏಕೀಕರಣೋತ್ತರ ಕರ್ನಾಟಕಕ್ಕೆ ಸಂಬಂಧಪಟ್ಟ ಪ್ರಮುಖ ಚಳವಳಿಗಳನ್ನು ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗವು ಪ್ರಕಟಿಸಿದೆ. ಪರಿಸರ, ರೈತ, ಕನ್ನಡ, ಜಲ, ಗಡಿ, ಹಿಂದುಳಿದ ಮತ್ತು ದಲಿತ ಚಳವಳಿಗಳ ಬಗ್ಗೆ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದ ವಿದ್ವಾಂಸರು ೧೯೯ನೆಯ ಇಸವಿಯಲ್ಲಿ ಪ್ರಕಟಿಸಿರುವುದನ್ನು ಬಿಟ್ಟರೆ ವಿವಿಧ ಚಳವಳಿಗಳ ಕುರಿತ ಮಾಹಿತಿಗಳು ಒಂದು ಕಡೇ ಸಿಗುವುದು ಅಲಭ್ಯ.[೧] ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಆದಂತಹ ಚಳವಳಿಗಳ ಬಗ್ಗೆ ಅದರಲ್ಲೂ ಸ್ಥಳೀಯವಾಗಿ ನಡೆದ ಚಳವಳಿಗಳ ಬಗ್ಗೆ ಅಧ್ಯಯನಗಳಾಗಲಿ ಅಥವಾ ಅದಕ್ಕೆ ಸಂಬಂಧಪಟ್ಟ ವಿವರಗಳಾಗಲಿ ಸಿಗುವುದು ಕಡಿಮೆ. ಅಖಿಲ ಭಾರತ ಮಟ್ಟದಲ್ಲಿ ಇಂತಹ ಅಧ್ಯಯನಗಳು, ಪ್ರಕಟಣೆಗಳು ಅಲ್ಲಲ್ಲಿ ಕಾಣಿಸಿಕೊಂಡರು ಅವುಗಳ ಚರ್ಚೆ ಕರ್ನಾಟಕದ ಮಟ್ಟಿಗೆ ಸೀಮಿತವಾಗಿರುವುದನ್ನು ನಾವು ನೋಡಬಹುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಕರ್ನಾಟಕದಲ್ಲಿ ತೀರ ಹಿಂದುಳಿದ ಪ್ರದೇಶವಾದ ರಾಯಚೂರು ಜಿಲ್ಲೆಯನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡು ಈ ಭಾಗದಲ್ಲಿ ನಡೆದ ವಿವಿಧ ಹೋರಾಟದ ಮಾದರಿಗಳನ್ನು ಅಧ್ಯಯನ ಮಾಡಲಾಗಿದೆ.

ಜಮೀನ್ದಾರಿ ಪ್ರಾಬಲ್ಯವಿರುವ ರಾಯಚೂರು ಪ್ರದೇಶದಲ್ಲಿ ಇಂದಿಗೂ ಸಾಮಾಜಿಕ ಸಂಘರ್ಷಗಳು ದಿನನಿತ್ಯದ ಹಾಗೂ ಹೋಗುಗಳಾಗಿವೆ. ಹಾಗೆಯೇ ಇದೇ ಬಗೆಯ ಸಂಘರ್ಷಗಳನ್ನು ಉಳಿದ ಕಡೆಗಳಲ್ಲೂ ಕೂಡ ನಾವು ನೋಡಬಹುದು. ಹೀಗಾಗಿ ರಾಯಚೂರಿನಲ್ಲಿ ದಲಿತ ಚಳವಳಿ, ಮಾದಿಗ ಚಳವಳಿ, ರೈತ ಚಳವಳಿ ಮತ್ತು ಕಾರ್ಮಿಕ ಚಳವಳಿಗಳ ಹೋರಾಟದ ವಿವಿಧ ಮಾದರಿಗಳನ್ನು (ಅಧ್ಯಾಯ ೩ರಲ್ಲಿ ಪು.೨೯-೭೫) ಪ್ರಸ್ತಾಪಿಸಲಾಗಿದೆ. ಇದಕ್ಕೆ ಸಂಬಂಧಪಟ್ಟ ವಿವರಗಳನ್ನು ಅಭ್ಯಸಿಸಿ ವಿಶ್ಲೇಷಿಸಲಾಗಿದೆ. ಶೋಷಣೆಗೆ ಒಳಗಾದ ವಿವಿಧ ಬಗೆಯ ಸಮುದಾಯಗಳು ಮತ್ತು ವರ್ಗಗಳು ಸ್ವಾತಂತ್ರ್ಯೋತ್ಸವದ ಭಾರತದಲ್ಲಿ ತಮ್ಮ ಹಕ್ಕುಗಳಿಗಾಗಿ ಹೋರಾಟ ಮಾಡಿರುವುದನ್ನು (ಅಧ್ಯಾಯ ೨, ಪು.೧೩-೨೮ ಮತ್ತು ಅಧ್ಯಾಯ ೩, ಪು.೨೯-೭೫) ದಾಖಲಿಸಲು ಪ್ರಯತ್ನಿಸಲಾಗಿದೆ. ಈ ಚಳವಳಿಗಳು ಅನೇಕ ಬಾರಿ ತೀವ್ರವಾದ ಮುನ್ನಡೆಯನ್ನು ಸಾಧಿಸಿದ್ದರೂ ಅದರ ಫಲಿತಾಂಶಗಳು ವ್ಯವಸ್ಥೆಯ ಪರವಾಗಿ ಇರುವುದನ್ನು ನಾವು ಗಮನಿಸಬಹುದು. ಇದೊಂದು ಬಗೆಯ ಪೂರ್ವ ಸತ್ಯವಾದರೂ ರಾಯಚೂರಿನ ಸಮುದಾಯಗಳಿಗೆ ತೆರೆದ ಕನ್ನಡಿಯಾಗಿದೆ.

ಇತ್ತೀಚಿನ ವರ್ಷಗಳಲ್ಲಿ ಅನುದಾನ ಪಡೆಯುತ್ತಿರುವ ಸಾಕ್ಷರತಾ ಸಮುದಾಯ ಚಳವಳಿಗಳ ಬಗ್ಗೆ (ಅಧ್ಯಾಯ ೪, ಪು.೭೬-೧೦೩) ವಿವರವಾಗಿ ಅಭ್ಯಸಿಸಲಾಗಿದೆ. ಈ ಬಗೆಯ ಚಳವಳಿಗಳು

ಜನಪರವಾಗಿ ಇರುವಂತೆ ಕಂಡುಬಂದರೂ ಬಹುತೇಕವಾಗಿ ಇವು 'ಸರಕಾರಿ' ಚಳವಳಿಗಳಾಗಿ ಕಂಡುಬರುತ್ತವೆ. ಸರಕಾರೇತರ ಸಂಸ್ಥೆಗಳ ಚಳವಳಿಗಳು ಭಿನ್ನ ಹಾದಿಯನ್ನು ತುಳಿದಿರುವಂತೆ ಕಂಡುಬಂದರೂ ಅವು ಸಾಮಾನ್ಯ ಜನರ ಕಷ್ಟಗಳನ್ನು ಮುಟ್ಟುವಲ್ಲಿ ಅಷ್ಟಾಗಿ ಸಫಲವಾಗಿಲ್ಲ ಎನ್ನುವ ವಿಚಾರ ಗಮನಾರ್ಹವಾದುದು (ಅಧ್ಯಾಯ ೪, ಪು.೭೬-೧೦೩). ವಿವರಿಸಿದ ಸಮುದಾಯ ಚಳವಳಿಗಳು ಕರ್ನಾಟಕದ ಉದ್ದಗಲ್ಲಕೂ ಸಾಮಾಜಿಕ ಕ್ರಾಂತಿಗಾಗಿ ಬೀದಿನಾಟಕಗಳನ್ನು ಏರ್ಪಡಿಸಿ ಜನರನ್ನು ಮುಟ್ಟುವ ಪ್ರಯತ್ನವನ್ನು ಮಾಡಿರುವುದನ್ನು ನಾವು ನೋಡಬಹುದು. ರಾಯಚೂರಿನಲ್ಲಿ ಸಮುದಾಯದವರು ಹಮ್ಮಿಕೊಂಡಿರುವ ಕಾರ್ಯಕ್ರಮಗಳಲ್ಲಿ ಅದರಲ್ಲಿ ಬಹಳ ಮುಖ್ಯವಾಗಿ ದಲಿತರಲ್ಲಿ ಜಾಗೃತಿ ಮೂಡಿಸುವ, ಸಾಕ್ಷರತಾ ಆಂದೋಲನಾ ಮಾಡಿರುವ ಮತ್ತು ಸಾಮಾಜಿಕ ಅನಿಷ್ಟ ಪದ್ಧತಿಗಳ ವಿರುದ್ಧ ಹೋರಾಟ ಮಾಡಿರುವ ಅಂಶಗಳನ್ನು(ಅಧ್ಯಾಯ ೪, ಪು.೭೬-೧೦೩) ದಾಖಲಿಸಲು ಪ್ರಯತ್ನ ಮಾಡಲಾಗಿದೆ.

*** *** ***

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಅತ್ಯಂತ ಹಿಂದುಳಿದಿರುವ ಜಿಲ್ಲೆ ರಾಯಚೂರು. ಡಾ.ಡಿ.ಎಂ.ನಂಜುಂಡಪ್ಪ ವರದಿಯನುಸಾರ ಈ ಪ್ರದೇಶ ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ಶೈಕ್ಷಣಿಕವಾಗಿಯೂ ತೀರಾ ಹಿಂದುಳಿದ ಪ್ರದೇಶವಾಗಿದೆ. ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಎರಡು ಸಂಘಟನೆಗಳನ್ನು ಕಾಣುತ್ತೇವೆ. ವೈಜನಾಥ್ ಪಾಟೀಲ್ ಅವರ ನೇತೃತ್ವದಲ್ಲಿರುವ 'ಹೈದರಾಬಾದ್ ಕರ್ನಾಟಕ ಜನಾಂದೋಲನಾ ಕೇಂದ್ರ'. ಇವರ ಬೇಡಿಕೆಗಳು ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕವಾಗಿ ಹಿಂದುಳಿದ ಇಡೀ ಹೈದರಾಬಾದ್ ಕರ್ನಾಟಕವನ್ನು ಅಭಿವೃದ್ಧಿ ಪಡಿಸುವುದಾಗಿದೆ. ರಾಘವೇಂದ್ರ ಕುಷ್ಟಗಿಯವರ ನೇತೃತ್ವದಲ್ಲಿ 'ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಹೋರಾಟ ಸಮಿತಿ' ಇದೆ. ಆದರೆ ಇಲ್ಲಿ ಎರಡು ಸಂಘಟನೆಗಳಲ್ಲಿ ಭಿನ್ನಾಭಿಪ್ರಾಯಗಳನ್ನು ಕಾಣುತ್ತೇವೆ. ವೈಜನಾಥ ಪಾಟೀಲ್ ಅವರು ತಮ್ಮ ಕೂಗು ಪ್ರತ್ಯೇಕ ರಾಜ್ಯ ಬೇಡಿಕೆಯದಾಗಿದೆ ಎಂದಿದ್ದಾರೆ. ಆದರೆ ರಾಘವೇಂದ್ರ ಕುಷ್ಟಗಿಯವರು ಪ್ರತ್ಯೇಕ ರಾಜ್ಯ ಬೇಡಿಕೆಯಿಂದ ನಮಗೆ ಯಾವುದೇ ಪರಿಹಾರ ಸಿಗುವುದಿಲ್ಲ. ಆದ ಕಾರಣ ನಮಗೆ ರಾಜಕೀಯ, ಸಾಮಾಜಿಕ ಮತ್ತು ಆರ್ಥಿವಾಗಿ, ಜೊತೆಗೆ ಸಾಂಸ್ಕೃತಿಕವಾಗಿ ಅಭಿವೃದ್ಧಿ ಮಾಡಬೇಕು. ಈ ಪ್ರದೇಶದಲ್ಲಿ ಹೆಚ್ಚಾಗಿ ಸ್ಥಳೀಯರಿಗೆ ಆದ್ಯತೆ ನೀಡಬೇಕೆಂಬುದೇ ಇವರ ಕೂಗು. ಆದುದರಿಂದ ಇಲ್ಲಿ ಎರಡು ಸಂಘಟನೆಗಳು ಇದ್ದ ಕಾರಣ ಈ ಪ್ರದೇಶದಲ್ಲಿ ಅಭಿವೃದ್ಧಿಯು ಕುಂಠಿತ ಗೊಂಡಿದೆ. ಪ್ರಸ್ತುತ ಆಗೊಮ್ಮೆ ಈಗೊಮ್ಮೆ ಈ ಹೋರಾಟಗಳನ್ನು ಮಾಡುವುದರಿಂದ ಸರಕಾರದ ಮೇಲೆ ಯಾವುದೇ ಪರಿಣಾಮ ಬೀರುತ್ತಿಲ್ಲ. ಈ ಹೋರಾಟಗಳಿಗೆ ದಲಿತರು ಮತ್ತು ಹಿಂದುಳಿದ ವರ್ಗಗಳ ಬೆಂಬಲಗಳಿಲ್ಲದಿರುವುದು ಮುಖ್ಯವಾದ ಹಿನ್ನೆಲೆಯಾಗಿದೆ. ಆದ ಕಾರಣ ಎರಡು ಸಂಘಟನೆಗಳು ದಲಿತರನ್ನು ಮತ್ತು ಹಿಂದುಳಿದವರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಒಗ್ಗಟ್ಟಾಗಿ ಹೋರಾಡಿದರೆ ಹೈದರಾಬಾದ್ ಕರ್ನಾಟಕ ಪ್ರದೇಶವು ಅಭಿವೃದ್ಧಿಯಾಗುವುದರ ಜೊತೆಗೆ ರಾಯಚೂರು ಕೂಡ ಹಿಂದುಳಿದ ಹಣೆಪಟ್ಟಿಯಿಂದ ಹೊರಬಂದಂತಾಗುತ್ತದೆ (ಪೂಣಚ್ಚ, ಅಪ್ರಕಟಿತ ಲೇಖನ, ೨೦೦೩: ೧೭).

ಪ್ರತ್ಯೇಕ ರಾಜ್ಯದ ಹೋರಾಟಗಳು ಈ ಪ್ರದೇಶದಲ್ಲಿ ಅಷ್ಟೊಂದು ತೀವ್ರವಾಗಿ ಇಲ್ಲದಿದ್ದರೂ, ಹೋರಾಟಗಳ ಆಶಯ ಅಲ್ಲಲ್ಲಿ ಸಂದರ್ಭಾನುಸಾರ ಕಾಣಿಸಿಕೊಳ್ಳುತ್ತವೆ. ಇದರ ಪರಿಣಾಮವನ್ನು ಹಾಗಾಗಿ ಸಾಮಾಜಿಕ ಮತ್ತು ರಾಜಕೀಯ ವರ್ತುಲಗಳಲ್ಲಿ ಕಾಣಬಹುದಾಗಿದೆ. ಉಳಿದ ಚಳವಳಿಗಳಿಗೆ ಹೋಲಿಸಿದಾಗ ಈ ಬಗೆಯ ಚಳವಳಿಗಳು ದಿಡೀರನೆ ಹುಟ್ಟಿಕೊಂಡು ದಿಡೀರನೆ ಕಣ್ಮರೆಯಾಗಿ ಮತ್ತು ಸಂದರ್ಭ ಬಂದಾಗ ದಿಡೀರನೆ ಮತ್ತೊಮ್ಮೆ ಆಗಾಗ ಕಾಣಿಸಿಕೊಳ್ಳುತ್ತವೆ.

ಲಭ್ಯವಿರುವ ಮಾಹಿತಿಗಳನ್ನು ಆಧರಿಸಿ ಮತ್ತು ಸಂದರ್ಶನ ತಂತ್ರವನ್ನು ಬಳಸಿ ರಾಯಚೂರು ಪ್ರದೇಶದ ಸಾಮಾಜಿಕ ಚಳವಳಿಗಳ ವಿಭಿನ್ನ ಆಯಾಮಗಳನ್ನು ಅಭ್ಯಸಿಸುವ ಒಂದು ಸಣ್ಣ ಪ್ರಯತ್ನವಿದು. ಕರ್ನಾಟಕದ ಚರಿತ್ರೆ ಬರವಣಿಗೆಯಲ್ಲಿ ಅದರಲ್ಲೂ ಏಕೀಕರಣ ಚರಿತ್ರೆ ಬರವಣಿಗೆಯಲ್ಲಿ ಕರ್ನಾಟಕದ ತೀರ ಹಿಂದುಳಿದ ರಾಯಚೂರು ಪ್ರದೇಶದ ಸಾಮಾಜಿಕ ಚರಿತ್ರೆಯನ್ನು ಈ ಮೂಲಕ ದಾಖಲಿಸುವ ಪ್ರಯತ್ನ ಇದಾಗಿದೆ.

**ಟಿಪ್ಪಣಿಗಳು**

೧. ಪ್ರೊ.ಲಕ್ಷ್ಮಣ್ ತೆಲಗಾವಿ ಅವರು ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು ಎನ್ನುವ ಕೃತಿಯನ್ನು, ಡಾ.ಟಿ.ವಿಜಯ್ ಪೂಣಚ್ಚ ಅವರು ರೈತ ಚಳವಳಿಗಳು (ಏಕೀಕರಣೋತ್ತರ ಕರ್ನಾಟಕದ ಚಳವಳಿ) ಎನ್ನುವ ಕೃತಿಯನ್ನು, ಡಾ.ಸಿ.ಆರ್.ಗೋವಿಂದರಾಜು ಅವರು ಕನ್ನಡ ಚಳವಳಿಗಳು ಎನ್ನುವ ಕೃತಿಯನ್ನು, ಡಾ.ಮೋಹನ್‌ಕೃಷ್ಣ ರೈ ಅವರು ಪರಿಸರ ಚಳವಳಿಗಳು ಎನ್ನುವ ಕೃತಿಯನ್ನು, ಡಾ ಚಿನ್ನಸ್ವಾಮಿ ಸೋಸಲೆ ಗಡಿ ಚಳವಳಿಗಳು ಎನ್ನುವ ಕೃತಿಯನ್ನು, ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಜಲಸಂಬಂಧಿ ಚಳವಳಿಗಳು ಎನ್ನುವ ಕೃತಿಯನ್ನು ೧೯೯೯ರಲ್ಲಿ ಪ್ರಕಟಿಸಿದ್ದಾರೆ. ಇವರೆಲ್ಲರೂ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸೇರಿದವರಾಗಿದ್ದಾರೆ.

## ೧. ಸಂದರ್ಶನಕಾರರು

೧. ಸಿ.ದಾನಪ್ಪ

೨. ಜೆ.ಬಿ.ರಾಜು

೩. ಮಹಮದ್ ಮೌಲಾ

೪. ರಾಘುವೇಂದ್ರ ಕುಷ್ಟಗಿ

೫. ಬಸಪ್ಪ

೬. ಎಸ್.ವಿಶ್ವನಾಥ್

೭. ಎಸ್.ಎಸ್.ಘಂಟಿ

೮. ಚಂದ್ರಶೇಖರ ಬಾಳೆ

೯. ಪುರುಷೋತ್ತಮ ಕಲಾಲಬಂಡಿ

೧೦. ಮಲ್ಲಯ್ಯ ಜಾಲಹಳ್ಳಿ

ಯಾವುದೇ ಒಂದು ಚಳವಳಿ ನಡೆಯಬೇಕಾದರೆ ಮುಖ್ಯವಾಗಿ ಚಳವಳಿ ನಾಯಕರು ಮಹತ್ವದ ಪಾತ್ರ ವಹಿಸುತ್ತಾರೆ. ಅವರು ಹೋರಾಟಗಳಲ್ಲಿ ಸಮಸ್ಯೆಗಳಿಗೆ ಸ್ಪಂದಿಸುವುದರ ಜೊತೆಗೆ ಜನರಿಗೆ ನ್ಯಾಯಯುತವಾದ ಸೌಲಭ್ಯಗಳನ್ನು ಒದಗಿಸಿ ಕೊಡುವಲ್ಲಿ ಇವರು ಮಾಡಿದ ಸಾಧನೆಗಳ ಬಗ್ಗೆ ಇಲ್ಲಿ ಬರೆಯಲಾಗಿದೆ.

### ೧. ಸಿ.ದಾನಪ್ಪ

ಇವರು ದಲಿತ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡ ವ್ಯಕ್ತಿ. ರಾಯಚೂರು ಪ್ರದೇಶದಲ್ಲಿ ದಲಿತರ ಜೀವನದಲ್ಲಿ ಬರುವ ಪ್ರತಿಯೊಂದು ಸಮಸ್ಯೆಗಳಿಗೆ ಸ್ಪಂದಿಸಿದ್ದಾರೆ. ಇವರ ಜೊತೆಗೆ ದಲಿತ ನೇತಾರರು ಕೂಡ ಇದರಲ್ಲಿ ಭಾಗವಹಿಸಿದ್ದಾರೆ. ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ ಮಸ್ಕಿ ಎಂಬ ಗ್ರಾಮದಲ್ಲಿ ೨೪.೦೬.೧೯೫೬ರಂದು ಜನಿಸಿದ್ದಾರೆ. ಇವರು ೧೯೭೦ರ ದಶಕದಲ್ಲಿ ದಲಿತ ಚಳವಳಿಯಲ್ಲಿ ದುಮುಕಿ ಇಂದು ಈ ಪ್ರದೇಶದಲ್ಲಿ ದಲಿತ ಸಂಘರ್ಷ ಸಮಿತಿಯ ಪ್ರಗತಿಗೆ ಕಾರಣರಾಗಿದ್ದಾರೆ. ಇವರು ಹೋರಾಟದ ಹಾಡುಗಳ ಮುಖಾಂತರ ದಲಿತರನ್ನು ಬೆಳೆಸುವಲ್ಲಿ ಕ್ರಿಯಾಶೀಲರಾಗಿದ್ದಾರೆ.

ಇವರು ದಲಿತ ಚಳವಳಿಯ ನಾಯಕರು. ಮೂಲತಃ ಪ್ರೊ.ಬಿ.ಕೃಷ್ಣಪ್ಪನವರಿಂದ ಪ್ರಭಾವಿತರಾದ ವ್ಯಕ್ತಿ. ರಾಯಚೂರು ಪ್ರದೇಶದಲ್ಲಿ ನಡೆದ ಹಲವಾರು ದಲಿತ ಹೋರಾಟದಲ್ಲಿ

ಭಾಗವಹಿಸಿದ್ದಾರೆ. ದಲಿತ ವ್ಯಕ್ತಿಯಾದ ಸಿ.ದಾನಪ್ಪನವರು ದಲಿತರ ಪರಿಸ್ಥಿತಿಗಳ ಬಗ್ಗೆ ಹಾಗೂ ಶೋಷಣೆಗೆ ಒಳಗಾದ ಜನರ ಪರವಾಗಿ, ಮಹಿಳಾ ಸಮಸ್ಯೆ, ಭೂಸಮಸ್ಯೆ ಮುಂತಾದ ಹೋರಾಟಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಚಳವಳಿ ಯಶಸ್ವಿಯಾಗುವಲ್ಲಿ ಪ್ರಮುಖ ಪಾತ್ರ ಇವರದು. ಇಡೀ ರಾಯಚೂರು ಪ್ರದೇಶದಲ್ಲಿ ದಲಿತರ ಸಮಸ್ಯೆಗೆ ಸ್ಪಂದಿಸಿದ ವ್ಯಕ್ತಿ. ದಲಿತರ ಹಾಡುಗಳನ್ನು ಹಾಡುವ ಮುಖಾಂತರವಾಗಿ ದಲಿತರಲ್ಲಿ ಸ್ಫೂರ್ತಿ ತುಂಬಿ ಚಳವಳಿಗೆ ತೀವ್ರ ಸ್ವರೂಪ ಕೊಟ್ಟ ವ್ಯಕ್ತಿ. ಇವರು ಮೆದಕಿನಾಳ ಭೂಹೋರಾಟದಲ್ಲಿ ಭೂಮಾಲೀಕರ ವಿರುದ್ಧ ಹೋರಾಡಿ, ಭೂಮಿಯನ್ನು ದಲಿತರಿಗೆ ದೊರಕಿಸಿಕೊಡುವಲ್ಲಿ ಇವರ ಪಾತ್ರ ಅನನ್ಯವಾದದ್ದು. ಪ್ರಸ್ತುತವಾಗಿ ಇವರು ಈ ಸಂಘಟನೆಯಲ್ಲಿ ಕಾರ್ಯಪ್ರವೃತ್ತರಾಗಿದ್ದಾರೆ.

**೨. ಜೆ.ಬಿ.ರಾಜು**

ಇವರು ಮಾದಿಗ ಮೀಸಲಾತಿ ಹೋರಾಟ ಸಮಿತಿಯನ್ನು ಈ ಪ್ರದೇಶದಲ್ಲಿ ಹುಟ್ಟು ಹಾಕುವಲ್ಲಿ ಪ್ರಮುಖರಾಗಿದ್ದಾರೆ. ರಾಯಚೂರು ತಾಲ್ಲೂಕಿನಲ್ಲಿ ೦೫.೧೨.೧೯೬೩ರಂದು ಜನಸಿದರು. ಪರಿಶಿಷ್ಟರಲ್ಲಿ ಮಾದಿಗ ಜನಾಂಗಕ್ಕೆ ನ್ಯಾಯಯುತವಾದ ಸ್ಥಾನ ಸಿಗಬೇಕೆಂಬುದು ಇವರ ಆಶಯ. ಇದರ ಜೊತೆಗೆ ಸರಾಕಾರದ ಮೇಲೆ ಒತ್ತಡ ತರುವಂತಹ ಹೋರಾಟಗಳನ್ನು ಮಾಡಿದ್ದಾರೆ. ಇವರು ಕೂಡ ಹಲವಾರು ಹೋರಾಟಗಳನ್ನು ಮಾಡುವ ಮುಖಾಂತರ ಮೀಸಲಾತಿ ಪಡೆಯುತ್ತೇವೆ ಎಂಬದು ಆಶಯನ್ನು ಹೊಂದಿದ್ದಾರೆ.

ಇವರು ಮಾದಿಗ ಮೀಸಲಾತಿ ಹೋರಾಟ ಸಮಿತಿಯ ರೂವಾರಿ. ಆಂಧ್ರಪ್ರದೇಶದಲ್ಲಿ ನಡೆದ ಮಾದಿಗ ಮೀಸಲಾತಿ ಸಂಘಟನೆ, ಹೋರಾಟಗಳ ಪ್ರಭಾವದಿಂದಾಗಿ ಇಲ್ಲಿ ಮೀಸಲಾತಿಗೋಸ್ಕರ ಸಂಘಟನೆ ಕಟ್ಟಲು ಕಾರಣೀಭೂತರು. ಇವರು ರಾಯಚೂರು ಪ್ರದೇಶದಲ್ಲಿ ಮೀಸಲಾತಿಯ ಸಲುವಾಗಿ ಅನೇಕ ಹೋರಾಟಗಳನ್ನು ಮಾಡಿದ್ದಾರೆ. ಪ್ರಸ್ತುತ ಈ ಭಾಗದಲ್ಲಿ ಪ್ರತಿಯೊಂದು ಹಳ್ಳಿಗಳಿಗೆ ಹೋಗಿ ಅಲ್ಲಿ ಮೀಸಲಾತಿಯ ಕಿಚ್ಚನ್ನು ಪ್ರಚಾರಪಡಿಸಿ, ಈ ಸಂಘಟನೆಯಲ್ಲಿ ಪಾಲ್ಗೊಂಡು ಇಡೀ ಈ ಪ್ರದೇಶದಲ್ಲಿ ಬಿರುಗಾಳಿಯಂತೆ ಮೀಸಲಾತಿಗಾಗಿ ಹೋರಾಟ ಮಾಡುತ್ತಿದ್ದಾರೆ. ಪರಿಶಿಷ್ಟರಲ್ಲಿ ಅತಿ ಹೆಚ್ಚು ಜನ ಹೊಂದಿರುವ ಮಾದಿಗರು ಮೀಸಲಾತಿಯಲ್ಲಿ ಮೀಸಲಾತಿ ಎಂಬ ತತ್ವದೊಂದಿಗೆ ತಮಗೆ ನ್ಯಾಯಬದ್ಧ ಮೀಸಲಾತಿ ಸಿಗಬೇಕೆಂಬುದು ಜೆ.ಬಿ.ರಾಜು ಅವರ ಆಶಯವಾಗಿದೆ. ಈಗಲೂ ಈ ಪ್ರದೇಶದಲ್ಲಿ ಹೋರಾಟವು ತೀವ್ರತೆಯಲ್ಲಿದೆ ಎಂದು ಹೇಳಬಹುದು.

**೩. ಮಹಮದ್ ಮೌಲಾ**

ಇವರು ಹಟ್ಟಿ ಚಿನ್ನದ ಗಣಿಯ ಕಾರ್ಮಿಕರ ನಾಯಕರು. ಇವರು ೦೧.೦೬.೧೯೫೮ರಲ್ಲಿ ರಾಯಚೂರು ಜಿಲ್ಲೆಯ ಲಿಂಗಸೂಗುರು ತಾಲ್ಲೂಕಿನ ಹಟ್ಟಿ ಪ್ರದೇಶದಲ್ಲಿ ಜನಿಸಿದರು. ಇವರು

ಕಾರ್ಮಿಕರ ಪರವಾಗಿ ನಿಂತ ನಾಯಕ. ಕಾರ್ಮಿಕರ ಸಮಸ್ಯೆಗಳಿಗೆ ಸ್ಪಂದಿಸುವುದರ ಜೊತೆಗೆ ಪರಿಹಾರ ಕಂಡುಕೊಳ್ಳುವುದು ಮತ್ತು ಆಡಳಿತವರ್ಗದವರ ಎದುರು ಮಾತನಾಡುವ ವ್ಯಕ್ತಿ. ಇವರು ಇಂದೂ ಕಾರ್ಮಿಕರ ಹೋರಾಟಗಳಲ್ಲಿ ಭಾಗವಹಿಸುತ್ತಿರುವುದನ್ನು ಕಾಣುತ್ತೇವೆ.

ಹಟ್ಟಿ ಚಿನ್ನದ ಗಣಿಯಲ್ಲಿ ಕಾರ್ಮಿಕರ ಸ್ಥಿತಿಯು ಉತ್ತಮವಾಗಿಲ್ಲ ಮತ್ತು ಆಡಳಿತವರ್ಗದ ದುರಾಡಳಿತದಿಂದ ಕಾರ್ಮಿಕರಿಗೆ ಯಾವುದೇ ನ್ಯಾಯ ಮತ್ತು ಸೌಲಭ್ಯ ಸಿಗುತ್ತಿಲ್ಲ. ಇದರಿಂದಾಗಿ ಮೌಲಾರವರು ಕಾರ್ಮಿಕರ ನಾಯಕರಾಗಿ ಅನೇಕ ಹೋರಾಟಗಳನ್ನು ಮಾಡಿದ್ದಾರೆ. ಈ ಆಡಳಿತವರ್ಗದ ದುರಾಡಳಿತ ವಿರುದ್ಧ ಯಶಸ್ವಿಯಾಗುವಲ್ಲಿ ಮತ್ತು ಕಾರ್ಮಿಕ ಜೀವನಕ್ಕೆ ಉತ್ತಮವಾದ ಜೀವನ ನಡೆಸುವಲ್ಲಿ ಮೌಲಾರವರ ಪಾತ್ರ ತುಂಬ ಮಹತ್ವವಾದದ್ದು. ಈಗಲೂ ಅಲ್ಲಿನ ಸಮಸ್ಯೆಗಳ ವಿರುದ್ಧ ಹೋರಾಟ ಮಾಡುತ್ತಿದ್ದಾರೆ.

**೪. ರಾಘವೇಂದ್ರ ಕುಷ್ಟಗಿ**

ಇವರು ರಾಯಚೂರು ಪ್ರದೇಶದಲ್ಲಿ ವಿದ್ಯಾರ್ಥಿ ದೆಸೆಯಿಂದಲೇ ಹೋರಾಟಕ್ಕಿಳಿದರು. ೦೬.೦೬.೧೯೫೦ರಲ್ಲಿ ರಾಯಚೂರಿನಲ್ಲಿ ಜನಸಿದರು. ಇವರು ಕಾರ್ಮಿಕರ ಪರವಾಗಿ ನಿಂತ ನಾಯಕ. ಯುವಕರಿಗೆ ಉದ್ಯೋಗ ದೊರಕಿಸಿಕೊಡುವಲ್ಲಿ ಇವರ ಪಾತ್ರ ಅನನ್ಯ. ಸ್ಥಳೀಯತೆಗೆ ಆದ್ಯತೆ ನೀಡಬೇಕು. ಜೊತೆಗೆ ಬಡವರಿಗಾಗಿ ಹಲವಾರು ಹೋರಾಟಗಳನ್ನು ಇಂದಿಗೂ ಕೂಡ ಮಾಡುತ್ತಿರುವುದು ಕಾಣುತ್ತೇವೆ.

ಇವರು ರಾಯಚೂರು ಪ್ರದೇಶದಲ್ಲಿ ಹಲವಾರು ಹೋರಾಟ ಮಾಡಿದ್ದಾರೆ. ಕಾರ್ಮಿಕ ಪರವಾಗಿ ಹಲವು ಯೋಜನೆಗಳು ಯಶಸ್ವಿಯಾಗುವಲ್ಲಿ ಇವರ ಪಾತ್ರ ಮುಖ್ಯವಾಗಿದೆ. ರಾಯಚೂರಿನಲ್ಲಿರುವ ಶಕ್ತಿನಗರದ ಉಷ್ಣ ವಿದ್ಯುತ್ ಕೇಂದ್ರದಲ್ಲಿ ಯುವಕರಿಗೆ ಉದ್ಯೋಗ ದೊರಕಿಸಿಕೊಡುವಲ್ಲಿ ಇವರ ಪಾತ್ರ ಅನನ್ಯ. ಅಲ್ಲದೇ ಹತ್ತಿ ಗಿರಣಿ ಕಾರ್ಮಿಕರಿಗೆ ಉದ್ಯೋಗ ಕೊಡಿಸುವಲ್ಲಿ ಮತ್ತು ರಿಕ್ಷಾ, ಲಾರಿ ಡ್ರೈವರ್‌ಗಳಿಗೆ ಸಂಘಟನೆ ಕಟ್ಟಿಕೊಡುವಲ್ಲಿ ಮಹತ್ವದ ಕಾರ್ಯ ನಿರ್ವಹಿಸಿದ್ದಾರೆ. ಈಗಲೂ ಕೂಡ ಇವರು ಹಿಂದುಳಿದ ಜನತೆಯ ಬೆನ್ನೆಲುಬಾಗಿ ಹಲವಾರು ಹೋರಾಟಗಳನ್ನು ಮಾಡುತ್ತಿರುವುದನ್ನು ನಾವು ಕಾಣಬಹುದು.

**೫. ಬಸಪ್ಪ**

ಮೂಲತಃ ಹಳ್ಳಿಗಳಿಂದಲೇ ಸಾಕ್ಷರತೆ ಪ್ರಗತಿ ಸಾಧಿಸಬೇಕೆಂಬ ಛಲ ಹೊಂದಿದ ಇವರು ಜಿಲ್ಲಾ ಸಾಕ್ಷರತಾ ಸಮಿತಿಯಲ್ಲಿ ಜಿಲ್ಲಾ ಸಂಯೋಜಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇಂದು ಇಡೀ ರಾಯಚೂರು ಪ್ರದೇಶದಲ್ಲಿ ಅನಕ್ಷರತೆ ಎಂಬ ಪಿಡುಗನ್ನು ತೊಡೆದು ಹಾಕಲು, ಪ್ರತಿಯೊಂದು ಗ್ರಾಮಗಳಲ್ಲಿ ಯೋಜನೆಗಳನ್ನು ಹಾಕಿಕೊಂಡು ಸಾಕ್ಷರತೆ ಮುಟ್ಟುವಲ್ಲಿ ಇವರ ಪಾತ್ರ ಪ್ರಮುಖವಾಗಿದೆ.

ರಾಯಚೂರಿನ ಪ್ರತಿಯೊಂದು ಗ್ರಾಮುಗಳಿಗೆ ತೆರಳಿ ಅಲ್ಲಿನ ವಯಸ್ಕರನ್ನು ಗುರುತಿಸಿ ಅವರಿಗೆ ಸಾಕ್ಷರತೆ ಕಲಿಸುವಲ್ಲಿ ಇವರ ಪಾತ್ರ ಪ್ರಮುಖವಾಗಿದೆ. ಅಲ್ಲದೇ ಸಾಕ್ಷರತೆಯ ಹಿಂದುಳಿದ ಜಿಲ್ಲೆ ಎಂಬ ಹಣೆಪಟ್ಟಿಯನ್ನು ಹೋಗಲಾಡಿಸುವಲ್ಲಿ ಇವರು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವುದನ್ನು ಕಾಣಬಹುದು. ಸ್ವಲ್ಪಮಟ್ಟಿಗಾದರೂ ಈ ಪ್ರದೇಶದಲ್ಲಿ ಉತ್ತಮವಾದ ಪ್ರಗತಿಯನ್ನು ಕಂಡಿರುವುದು, ಮುಂದೆ ಕೂಡ ಅನಕ್ಷರತೆಯನ್ನು ಕಡಿಮೆ ಮಾಡಿ ಅಕ್ಷರಸ್ಥರನ್ನಾಗಿ ಮಾಡುವುದೇ ಇವರ ಗುರಿಯಾಗಿದೆ ಎಂದು ಹೇಳಬಹುದು.

**೬. ಎಸ್.ವಿಶ್ವನಾಥ್**

ಇವರು ರಾಯಚೂರು ಪ್ರದೇಶದ ಬೀದಿನಾಟಕಗಳಲ್ಲಿ ಹೆಚ್ಚಾಗಿ ಕಾಣಿಸಿಕೊಂಡ ವ್ಯಕ್ತಿ. ಬೀದಿನಾಟಕಗಳನ್ನು ಆಕರ್ಷಿಸಿ ಜನರಿಗೆ ಈ ಬೀದಿನಾಟಕಗಳ ಪ್ರದರ್ಶನ ನೀಡುವ ಮೂಲಕ ಸಮಾಜದ ಸಮಸ್ಯೆಗಳ ಬಗ್ಗೆ ಪರಿಹಾರ ಕಂಡುಕೊಳ್ಳುತ್ತ, ಹೋರಾಟಕ್ಕಿಳಿಯುವ ಮನೋಭಾವನೆ ಮತ್ತು ಬಡತನದ ಬಗ್ಗೆ ಇವರು ಈ ನಾಟಕಗಳಲ್ಲಿ ತೋರಿಸುತ್ತಿದ್ದರು.

ಇವರು ತಮ್ಮ ಜೀವನದಲ್ಲಿ ಬೀದಿನಾಟಕವೇ ನನ್ನ ಆತ್ಮ ಎಂಬ ಪರಿಕಲ್ಪನೆಯನ್ನು ಇಟ್ಟುಕೊಂಡಂಥವರು ಬಡತನ, ಶೋಷಣೆ, ಬಾಲ್ಯವಿವಾಹ ಖಂಡನೆ, ಅನಕ್ಷರತೆ ಹೋಗಲಾಡಿಸುವುದು ಮತ್ತು ರೈತರ ಸಾವು ನೋವುಗಳ ಬಗ್ಗೆ ಬೀದಿನಾಟಕಗಳ ಮೂಲಕ ಜನರಲ್ಲಿ ಅರಿವು ಮೂಡಿಸುವುದು. ಇವರ ಮೊದಲ ಕರ್ತವ್ಯವಾಗಿದೆ. ಬೀದಿನಾಟಕಗಳನ್ನು ರಾಯಚೂರು ಪ್ರದೇಶದ ಮೂಲೆ ಮೂಲೆಗಳಲ್ಲಿ ಮಾಡಿರುವುದಲ್ಲದೆ ಜನರಿಗೆ ನೇರವಾಗಿ ವಿಷಯವನ್ನು ತಲುಪಿಸುವಲ್ಲಿ ಇವರ ಪಾತ್ರ ಪ್ರಮುಖವಾಗಿದೆ.

**೭. ಎಸ್.ಎಸ್.ಘಂಟಿ**

ಇವರು ಸಮೂಹದಲ್ಲಿ ಕಾರ್ಯಕ್ರಮ ಸಂಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಗುಲಬರ್ಗಾ ಜಿಲ್ಲೆಯ ಜೇವರ್ಗಿ ತಾಲ್ಲೂಕಿನ ಹಿಪ್ಪರಗಿ ಎಂಬ ಹಳ್ಳಿಯಲ್ಲಿ ಜನಿಸಿದರು. ಇವರು ಈಗ ದೇವದುರ್ಗ ತಾಲ್ಲೂಕಿನ ಸಮೂಹದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಇವರು ಹಲವು ಸಮಸ್ಯೆಗಳಿಗೆ ಪರಿಹಾರ ನೀಡುವುದಕ್ಕೆ ಸರಕಾರದ ನೆರವನ್ನು ಪಡೆಯಲು ಯಶಸ್ವಿಯಾಗಿದ್ದಾರೆ. ಹಿಂದುಳಿದ ಈ ಪ್ರದೇಶದಲ್ಲಿ ಪ್ರಗತಿ ಸಾಧಿಸುವ ಗುರಿಯನ್ನು ಹೊಂದಿದ್ದಾರೆ.

ಹಿಂದುಳಿದ ಜನತೆಯ ಪ್ರಗತಿ ಸಾಧಿಸುವಲ್ಲಿ ಇವರ ಪಾತ್ರ ಮುಖ್ಯವಾದದ್ದು. ಏಕೆಂದರೆ ರಾಯಚೂರು ಜಿಲ್ಲೆ ಹಿಂದುಳಿದ ಕಾರಣ ಇಲ್ಲಿ ಸಮುದಾಯ ಅಭಿವೃದ್ಧಿ ಮಾಡುವುದಸ್ಕೋರ ಎಚ್.ಐ.ವಿ.ಯನ್ನು ಕಡಿಮೆ ಮಾಡುವುದು, ಅಂಗವಿಕಲರಿಗೆ ಜೀವನದ ಬಗ್ಗೆ ಆಶಯ

ಹುಟ್ಟಿಸುವಂತೆ ಮಾಡುವುದು, ಮಹಿಳಾ ಸಮಸ್ಯೆಗಳಿಗೆ ಸ್ಪಂದಿಸುವುದು, ಸ್ಲಂ ಜನಗಳ ಅಭಿವೃದ್ಧಿ ಮುಂತಾದ ಯೋಜನೆಗಳನ್ನು ಹಾಕಿಕೊಂಡು ಇವರು ಇಡೀ ರಾಯಚೂರು ಸಮುದಾಯ ಅಭಿವೃದ್ಧಿಯನ್ನು ಮಾಡುವುದು ಇವರ ಆಲೋಚನೆಯಾಗಿದೆ.

**೮. ಚಂದ್ರಶೇಖರ ಬಾಳೆ**

ಇವರು ಇಡೀ ರಾಯಚೂರು ಪ್ರದೇಶಕ್ಕೆ ಹೋರಾಟದ ಸ್ಫೂರ್ತಿ ಕೊಟ್ಟವರು. ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಮಸರಕಲ್ ಗ್ರಾಮದಲ್ಲಿ ಜನಿಸಿದ ಇವರು ಈ ಪ್ರದೇಶದ ಹೆಸರುವಾಸಿಯಾದ ವ್ಯಕ್ತಿ. ಇತರ ಹೋರಾಟಗಳಿಗೆ ಸ್ಫೂರ್ತಿದಾಯಕ. ಇವರು ರೈತ ಹೋರಾಟಗಳಿಗೆ ಮಾತ್ರ ಸೀಮಿತವಾಗಿದ್ದಾರೆ. ನಾರಾಯಣಪುರ ಬಲದಂಡೆ ಕಾಲುವೆ ಬರಲು ಕಾರಣೀಭೂತರು. ಈ ಪ್ರದೇಶದ ಹೋರಾಟಗಳಲ್ಲಿ ಭಾಗವಹಿಸುವಲ್ಲಿ ಇವರ ಪಾತ್ರ ಅನನ್ಯ. ಹಿಂದುಳಿದ ತಾಲ್ಲೂಕು ದೇವದುರ್ಗ ಹಣೆಪಟ್ಟಿಯನ್ನು ಕಿತ್ತು ಹಾಕಿ ಅಲ್ಲಿ ಪ್ರಗತಿ ಕಂಡುಬರಲು ಇವರ ಪಾತ್ರ ತುಂಬಾ ಮಹತ್ವದ್ದಾಗಿದೆ ಎಂದು ಹೇಳಬಹುದು.

**೯. ಮಲ್ಲಯ್ಯ ಜಾಲಹಳ್ಳಿ**

ಇವರು ರೈತ ಹೋರಾಟಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ ವ್ಯಕ್ತಿ. ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಜಾಲಹಳ್ಳಿ ಗ್ರಾಮದಲ್ಲಿ ಜನಿಸಿದ್ದಾರೆ. ಇವರು ರೈತರ ಪರವಾಗಿ ನೆಲೆ ನಿಂತ ನಾಯಕ. ಇವರು ರೈತರ ಪ್ರತಿಯೊಂದು ಸಮಸ್ಯೆಗಳಿಗೆ ಸ್ಪಂದಿಸಿದ ವ್ಯಕ್ತಿ, ಬರಗಾಲ, ಭಟ್ಟರಂಚಿನಾಳ ಮತ್ತು ಗಂಗಾವತಿ ಇನ್ನೂ ಮುಂತಾದ ಹೋರಾಟಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ. ಈಗಲೂ ಇವರು ರೈತ ಹೋರಾಟಗಳಲ್ಲಿ ದುಡಿಯುತ್ತಿದ್ದಾರೆ.

**೧೦. ಪುರುಷೋತ್ತಮ ಕಲಾಲಬಂಡಿ**

ಇವರು ರಾಯಚೂರು ಪ್ರದೇಶದ ಹತ್ತಿಗಿರಣಿ ಕಾರ್ಮಿಕರ ನಾಯಕ. ೧೨.೧೨.೧೯೫೧ರಲ್ಲಿ ರಾಯಚೂರಿನಲ್ಲಿ ಜನಿಸಿದ್ದಾರೆ. ಮಾರ್ಕ್ಸ್‌ವಾದಿ ಚಿಂತನೆಗೆ ಜೋತುಬಿದ್ದಿದ್ದಾರೆ. ಇಲ್ಲಿನ ಕಾರ್ಮಿಕರ ಪ್ರತಿಯೊಂದು ಸಮಸ್ಯೆಗಳಿಗೆ ಪರಿಹಾರ ನೀಡುವಲ್ಲಿ ಮತ್ತು ಆಡಳಿತವರ್ಗದ ಜೊತೆಗೆ ಹೋರಾಟ ಮಾಡಿ ಯಶಸ್ವಿಯಾದದನ್ನು ನಾವು ಕಾಣುತ್ತೇವೆ. ಆದರೆ ಒಬ್ಬ ರಿಕ್ಷಾ ಚಾಲಕನಿಂದ ಹಿಡಿದು ಕಾರ್ಮಿಕರ ಪರವಾಗಿ ನಿಂತ ಧೀಮಂತ. ಆದರೆ ಈಗ ಈ ಹತ್ತಿಗಿರಣಿಯನ್ನು ಯಂತ್ರೋಪಕರಣಗಳ ವೈಫಲ್ಯದಿಂದ ಮುಚ್ಚಲಾಗಿದೆ. ಈಗ ಇವರು ಬೇರೆ ಕೆಲಸ ಮಾಡುತ್ತಿದ್ದಾರೆ.

ಈ ಮೇಲಿನ ಎಲ್ಲ ಅಂಶಗಳನ್ನು ಸಂದರ್ಶನಕಾರರನ್ನು ಭೇಟಿ ಮಾಡಿ ಅವರು ಚಳವಳಿಗಳಲ್ಲಿ ನಿರ್ವಹಿಸಿದ ಪಾತ್ರ, ಅದರಿಂದ ಆದ ಅನುಕೂಲಗಳನ್ನು ಪರಿಶೀಲಿಸಲಾಗಿದೆ.

## ೨. ಪರಾಮರ್ಶನ ಗ್ರಂಥಗಳು

### ಅ. ಪ್ರಕಟಿತ ಗ್ರಂಥಗಳು


೧. ಅನಂತರಾಮರಾವ್ ಕೆ., **ಸುವರ್ಣ ಕರ್ನಾಟಕ ದರ್ಶನ**(೫೦ ಸಂವತ್ಸರಗಳು), ವಿದ್ಯಾ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೬

೨. ಅನಂತಸ್ವಾಮಿ ಬಿ.ಕೆ., **ಅ.ನ.ಕೃ ಮತ್ತು ಕನ್ನಡ ಚಳವಳಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೩. ಅಮರೇಶ ನುಗುಡೋಣಿ, **ಬಿಸಿಲ ಹನಿಗಳು**, ಜಿಲ್ಲಾ ಸಾಹಿತ್ಯ ಪರಿಷತ್ತು, ರಾಯಚೂರು, ೧೯೯೫

೪. ಅಮರೇಶ ನುಗಡೋಣಿ, **ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದು ಕರ್ನಾಟಕ ವಿಮೋಚನಾ ಚಳವಳಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೫. ಅಮರೇಶ ನುಗುಡೋಣಿ, **ಹೈದ್ರಾಬದ್ ಕರ್ನಾಟಕದ ಹಾಡು ಪಾಡು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬. ಅರವಿಂದ ಮಾಲಗತ್ತಿ, **ದಲಿತ ಮಾರ್ಗ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨

೭. ಉಷಾ ಎಂ., **ಮಹಿಳಾ ಚಳವಳಿ ಮತ್ತು ಮಹಿಳಾ ವಿಷಯಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೮. ಕಕ್ಕಿಲ್ಲಾಯ ಬಿ.ವಿ., **ಬರೆಯದ ದಿನಚರಿಯ ಮರೆಯದ ಪುಟಗಳು**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೩

೯. ಕಮಲೇಶ ಕೆ.ಆರ್., **ಕರ್ನಾಟಕ ರಾಜಕೀಯ ಚಿಂತನೆ**, ಎಸ್.ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನ, ಬೆಂಗಳೂರು, ೨೦೦೩

೧೦. ಕೃಷ್ಣಪ್ಪ ಎಸ್., **ಶಿಕ್ಷಣದ ತಾತ್ವಿಕ ಮತ್ತು ಮೂಲಾಧರಗಳು**, ಮೀರಾ ಪ್ರಿಂಟರ್ಸ್, ಮೈಸೂರು, ೧೯೭೬

೧೧. ಗಂಗಾರಾಮ್ ಚಾಂಡಾಳ, **ಕರ್ನಾಟಕ ದಲಿತ ಚಳವಳಿ ಮತ್ತು ಡಾ.ಬಿ.ಆರ್.ಅಂಬೇಡ್ಕರ್**, ಚೈತ್ರಾ ಪ್ರಕಾಶನ, ಚಿಕ್ಕ ತಿರುಪತಿ, ೧೯೯೨

೧೨. ಗೋಪಾಲಕೃಷ್ಣಯ್ಯ ಕೆ.ಎಲ್., **ಸಮಾಜವಾದದ ಪರಿಚಯ**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೮೨

೧೩. ಗೋಪಾಲ್‌ರಾವ್ ಹಜೀಬ್, **ಹೈದ್ರಾಬಾದ್ ಮುಕ್ತಿ ಸಂಘರ್ಷ**, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೨೦೦೧

೧೪. ಗೋವಿಂದರಾಜು ಸಿ.ಆರ್., **ಕನ್ನಡ ಚಳವಳಿಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೧೫. ಗಾಯತ್ರಿ ಎನ್., **ಮಹಿಳಾ ಚಳವಳಿಯ ಮಜಲುಗಳು**, ಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೮

೧೬. ಚಂದ್ರಶೇಖರ್ ಬಿ. ದಾಮ್ಲೆ, **ಭಾರತೀಯ ಸಾಮಾಜಿಕ ಅಧ್ಯಯನ**, ನವೀನ ಪ್ರಕಾಶನ, ಬೆಂಗಳೂರು, ೧೯೯೨

೧೭. ಚಂದ್ರಶೇಖರ ಎಸ್., **ಸಿರಿದುರ್ಗ**, ತಾಲ್ಲೂಕು ಸಾಹಿತ್ಯ ಪರಿಷತ್, ದೇವದುರ್ಗ, ೨೦೦೩

೧೮. ಚಂದ್ರಶೇಖರ ಟಿ.ಆರ್., **ದಲಿತ ಅಧ್ಯಯನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೨೦೦೫

೧೯. ಚಂದ್ರಶೇಖರ ಟಿ.ಆರ್., **ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು**, ಸಿ.ವಿ.ಜಿ.ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

೨೦. ಚಂದ್ರಶೇಖರ ಟಿ.ಡಿ., **ಭಾರತದ ಇತಿಹಾಸ**, ಸಂ.೩, ಪೂರ್ಣ ಪ್ರಕಾಶನ, ಶಿವಮೊಗ್ಗ, ೨೦೦೦

೨೧. ಚಾಂಡಾಳ, **ಕರ್ನಾಟಕ ದಲಿತ ಚಳವಳಿ ಮತ್ತು ಡಾ.ಬಿ.ಆರ್.ಅಂಬೇಡ್ಕರ್**, ಚೈತ್ರಾ ಪ್ರಕಾಶನ, ಮಾಲೂರು, ಕೋಲಾರ ಜಿಲ್ಲೆ, ೧೯೯೨

೨೨. ಚಿನ್ನಸ್ವಾಮಿ ಸೋಸಲೆ ಎನ್., **ಗಡಿ ಚಳವಳಿಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೨೩. ಚಿನ್ನಸ್ವಾಮಿ ಸೋಸಲೆ ಎನ್. **ದಲಿತರ ಮೇಲೆ ದೌರ್ಜನ್ಯ ಒಂದು ನೋಟ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೪. ಜಂಬಣ್ಣ ಅಮರಚಿಂತ, **ಅಮರಚಿಂತ ಕಾವ್ಯ**, ವಿಕಾಸವೇದಿಕೆ, ರಾಯಚೂರು, ೧೯೯೩

೨೫. ಜಾಗೀರ್‌ದಾರ್ ಆರ್.ಜೆ. ಮತ್ತು ಲಿಂಗಸೂಗೂರು ವಿಠಲರಾವ್, **ಹೈದ್ರಾಬಾದ್ ಕರ್ನಾಟಕ**, ಪ್ರೇಮಸಾಗರ ಮುದ್ರಣಾಲಯ, ಹೈದ್ರಾಬಾದ್, ೧೯೪೧

೨೬. ಜಾಣಗೆರೆ ವೆಂಕಟರಾಮಯ್ಯ, **ಪತ್ರಿಕೋದ್ಯಮ ಮತ್ತು ಚಳವಳಿ**, ಪ್ರೆಸ್‌ಕ್ಲಬ್ ಆಫ್ ಬೆಂಗಳೂರು, ೨೦೦೫

೨೭. ತಂಬಂಡ ವಿಜಯ್ ಪೂಣಚ್ಚ, **ರೈತ ಚಳವಳಿಗಳು(ಏಕೀಕರಣೋತ್ತರ ಕರ್ನಾಟಕದ ಚಳವಳಿ)**, ಸಂಪುಟ ೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೨೮. ತಂಬಂಡ ವಿಜಯ್ ಪೂಣಚ್ಚ, ರೈತ ಚಳವಳಿ, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ೪, ಚರಿತ್ರೆ, (ಸಂ) ತಂಬಂಡ ವಿಜಯ್ ಪೂಣಚ್ಚ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೨೯. ತಂಬಂಡ ವಿಜಯ್ ಪೂಣಚ್ಚ, ೨೦೦೩ರಲ್ಲಿ ಮದ್ರಾಸ್ ಇನ್‌ಸ್ಟಿಟ್ಯೂಟ್ ಆಫ್ ಡೆವಲಪ್‌ಮೆಂಟ್ ಸ್ಟಡೀಸ್‌ನಲ್ಲಿ ಮಂಡಿಸಿದ ಪ್ರಬಂಧ (ಅಪ್ರಕಟಿತ)

೩೦. ತುಕಾರಾಂ ಎಸ್., ರಾಜು ಬಿ., ಸಾಕ್ಷರತಾ ದಾರಿಯ ಸಾವಿರ ಹೆಜ್ಜೆ (ಕರ್ನಾಟಕ ರಾಜ್ಯ ಸಾಕ್ಷರತಾ ಆಂದೋಲನದ ದಶಕದ ಸಾಧನೆಗಳು), ನಿರ್ದೇಶಕರು, ರಾಜ್ಯ ಸಂಪನ್ಮೂಲಕೇಂದ್ರ, ಮೈಸೂರು, ೨೦೦೦

೩೧. ಧ್ರುವನಾರಾಯಣ, ಸ್ವಾತಂತ್ರ್ಯಾಂದೋಳನದಲ್ಲಿ ರಾಯಚೂರು ಜಿಲ್ಲೆ, ಕರ್ನಾಟಕ ಸಂಘ, ರಾಯಚೂರು, ೧೯೭೩

೩೨. ನಾಗಪ್ಪ ಟಿ.ಆರ್. ಮತ್ತು ವೆಂಕಟಯ್ಯ ಎನ್., ಸಂಪೂರ್ಣ ಸಾಕ್ಷರತಾ ಕಾರ್ಯಕ್ರಮ, ಚೇತನ ಬುಕ್‌ಹೌಸ್, ಮೈಸೂರು, ೧೯೯೬

೩೩. ನಾಗರಾಜ ಟಿ., ಸಾಮಾಜಿಕ ಚಳವಳಿಗಳು, ಚೇತನ್ ಬುಕ್‌ಹೌಸ್, ಮೈಸೂರು, ೧೯೯೯

೩೪. ನಾಗೇಶ್ ಎಚ್.ವಿ., ಭಾರತದಲ್ಲಿ ರೈತ ಹೋರಾಟಗಳು, ಚಂದ್ರನಾಥ ಪ್ರಕಾಶನ, ಧಾರವಾಡ, ೧೯೮೪

೩೫. ಪ್ರಶಾಂತ್ ಎಚ್.ಡಿ., ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೩೬. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೩೭. ಪೋತೆ ಎಚ್.ಟಿ., ಜಾನಪದ ಸಿರಿ, ಕುಮಾರ ಪೂರ್ಣಿಮ ಪ್ರಕಾಶನ, ರಾಯಚೂರು, ೨೦೦೩

೩೮. ಪೋತೆ ಎಚ್.ಟಿ. ಮತ್ತು ಆರ್.ಸಿಂಧೆ ಜಗನ್ನಾಥ, ಬೆಂದವರು, ಪಲ್ಲವಿ ಪ್ರಕಾಶನ, ಗುಲಬರ್ಗಾ, ೨೦೦೫

೩೯. ಬಸವಯ್ಯ ಕೆ., ಸಾಕ್ಷರತೆ ಮತ್ತು ವಯಸ್ಕರ ಶಿಕ್ಷಣ, ವಾಣಿ ಪ್ರೆಸ್, ಮೈಸೂರು, ೧೯೭೨

೪೦. ಬಾಲಚಂದ್ರ ಜಯಶೆಟ್ಟಿ, ಹೈದರಾಬಾದ್ ಕರ್ನಾಟಕದ ವಿಮೋಚನಾ ಚಳವಳಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

೪೧. ಭಾಸ್ಕರ ಟಿ.ಎಂ., ಕಲಬುರ್ಗಿ ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

೪೨. ಬೋರಲಿಂಗಯ್ಯ ಹಿ.ಚಿ. ಮತ್ತು ಎನ್.ಹುಚ್ಚಪ್ಪ ಮಾಸ್ತರ, **ಕಾಗೋಡು ಚಳವಳಿ**, ಸುವರ್ಣ ಸಂಪುಟ, ಶಿವಮೊಗ್ಗ, ೧೯೯೮

೪೩. ಮಹಾಬಲೇಶ್ವರಪ್ಪ ಬಿ.ಸಿ., **ಹೈದ್ರಾಬಾದ್ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿ**, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೪೪. ಮಹೇಶನ ಮ., **ಜಾಗತೀಕರಣ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೨

೪೫. ಮಣಿಪಾಲ ಆರ್ಕೆ, **ಸಾಮಾಜಿಕ ಚಳವಳಿಗಳು**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೯

೪೬. ಮಹಾದೇವಯ್ಯ ಪಿ., **ದಲಿತರು ಮತ್ತು ಪರ್ಯಾಯ ರಾಜಕಾರಣ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೪೭. ಮುನಿವೆಂಕಟಪ್ಪ ವಿ., **ದಲಿತ ಚಳವಳಿ** ಒಂದು ಅವಲೋಕನ, ವಿಚಾರವಾದಿ ಪ್ರಕಾಶನ, ಮೈಸೂರು, ೧೯೯೮

೪೮. ಮೋಹನ್‌ಕೃಷ್ಣ ರೈ ಕೆ., **ಪರಿಸರ ಚಳವಳಿಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೪೯. ಮೋಹನ್‌ಕೃಷ್ಣ ರೈ, **ಪ್ರಭುತ್ವ ಮತ್ತು ಜನತೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೫೦. ಮೃತ್ಯುಂಜಯ ಹೊರಕೇರಿ ಮತ್ತು ಬಸವಲಿಂಗ ಸೊಪ್ಪಿಮಠ, **ರಾಯಚೂರು ಜಿಲ್ಲಾ ದರ್ಶನ, ಬೆಳ್ಳಿ ಬೆಳಕು ಮಾಲೆ**, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

೫೧. ಮೊಗಳ್ಳಿ ಗಣೇಶ್, **ದಲಿತ ಕಥನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೫೨. ರಂಗನಾಥರಾವ್ ಜಿ.ಎನ್., **ಸೃಜನಶೀಲ**, ಪುರೋಗಾಮಿ ಬೆಂಗಳೂರು, ೧೯೯೬

೫೩. ರಾಮಸ್ವಾಮಿ ನು.ಅ., **ಗಬ್ಬೂರ ಹಂಪಣ್ಣ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೮

೫೪. ಲಕ್ಷ್ಮಣ್ ತೆಲಗಾವಿ, **ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೫೫. ಲಕ್ಷ್ಮಣ್ ತೆಲಗಾವಿ, **ಸ್ಥಳೀಯ ಚರಿತ್ರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೫೬. ವಿರೂಪಾಕ್ಷಿ ಪೂಜಾರಹಳ್ಳಿ, **ಜಲಸಂಬಂಧಿ ಚಳವಳಿಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೫೭. ವಿರೂಪಾಕ್ಷಿ ಪೂಜಾರಹಳ್ಳಿ, ದಲಿತರು ಮತ್ತು **ಚರಿತ್ರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೫೮. ವೀರಯ್ಯ ಡಿ.ಎಸ್., **ದಲಿತ ಚಿಂತನ,** ಸಪ್ನಬುಕ್ ಹೌಸ್, ಬೆಂಗಳೂರು, ೨೦೦೫

೫೯. ವಿಷ್ಣುನಾಯ್ಕ, **ದುಡಿಯುವ ಕೈಗಳ ಹೋರಾಟದ ಕತೆ** (ಉತ್ತರ ಕನ್ನಡ ಜಿಲ್ಲೆಯ ರೈತ ಜನಂದೋಲನಾ), ದಿನಕರ ದೇಸಾಯಿ ಸ್ಮಾರಕ ಪ್ರತಿಷ್ಠಾನ(ರಿ), ಅಂಕೋಲ, ಉತ್ತರ ಕನ್ನಡ ಜಿಲ್ಲೆ, ೨೦೦೪

೬೦. ವೆಂಕಟರಾವ್ ಡಿ., **ಭಾರತದ ಕೈಗಾರಿಕೆ ಬೆಳವಣಿಗೆ ಮತ್ತು ಸಮಸ್ಯೆಗಳು,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೫

೬೧. ವೆಂಕಟೇಶ ಕೆ. ಮತ್ತು ಸರೋಜಾ ಬಿ., **ಹೈದ್ರಾಬಾದ್ ಕರ್ನಾಟಕ ವರ್ತಮಾನ ತಲ್ಲಣಗಳು,** ಪಲ್ಲವಿ ಪ್ರಕಾಶನ, ಬಳ್ಳಾರಿ, ೨೦೦೬

೬೨. ಸುಬ್ಬಣ್ಣ ಕೆ.ವಿ., **ಅರೆಶತಮಾನದ ಅರೆ ಬರಹಗಳು,** ಲೇಖನ ಸಂಕಲನ, ೧೯೫೪-೨೦೦೪, ೨೦೦೪

೬೩. ಶಿವರಾಮಯ್ಯ, **ದನಿಯಿಲ್ಲದವರ ದನಿ,** ಶಕ್ತಿ ಪ್ರಿಂಟರ್ಸ್ ಮತ್ತು ಪಬ್ಲೀಷರ್ಸ್, ಬೆಂಗಳೂರು, ೨೦೦೩

೬೪. ಸದಾಶಿವಪ್ಪ ಕುಂ.ಬಾ., **ಕುತೂಹಲದ ಕರ್ನಾಟಕ,** ಪವಿತ್ರ ಎಂಟರ್‌ಪ್ರೆಸಸ್, ಬೆಂಗಳೂರು, ೨೦೦೫

೬೫. ಹುಡಗಿ ಆರ್.ಕೆ., **ಬೀದಿನಾಟಕಗಳು,** ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

೬೬. Ghanshyam Shah, **Scoial Movements in India,** Sage Publications India(p) Ltd., New Delhi, 1990

೬೭. Lakshmi Nadakarni, **Sociology of Industrial worker,** Rawat Publications, Jaipur and New Delhi, 1998

೬೮. Peter Robb, **Dalit Movements and the Meanings of Labour in India,** Oxford University Press, VMCA Library, Jai Singh Road, New Delhi, 1999

೬೯. Ponna Wignaraja, **New Social Movements in the South** (Empowering the people), Vistar Publications, New Delhi, 1993

**ಬ. ಅಪ್ರಕಟಿತ ಗ್ರಂಥಗಳು**

೧. ಕೀರ್ತಿನಾಥ ಜಿ.ಎನ್., **ಶಿವಮೊಗ್ಗ ಜಿಲ್ಲೆಯಲ್ಲಿ ಸಮಾಜವಾದಿ ಚಳವಳಿಗಳು**(೧೯೪೦-೧೯೭೮), ಎಂ.ಫಿಲ್.ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫

೨. ಗುರುನಾಥ ಯ.ಹೂಗಾರ, ನವಸಾಕ್ಷರ ಮಾಲೆಯ ಪಠ್ಯಗಳ ಸಂವಹನ : ತೊಡಕುಗಳು, (ಕ್ಷೇತ್ರಾಧ್ಯಯನ), ಎಂ.ಫಿಲ್.ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

೩. ನಾಗಭೂಷಣಗೌಡ ಪಾಟೀಲ, **ಸಮಾಜವಾದಿ ಚಳವಳಿ ಮತ್ತು ಆಧುನಿಕ ಕನ್ನಡ ಸಾಹಿತ್ಯ**, ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೪. ಮಹೇಶ ಕುಮಾರ್ ಎಸ್.ಸುಂಕನೂರು, **ಗುಲಬರ್ಗಾ ಎಂ.ಎಸ್.ಕೆ.ಮಿಲ್: ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಅಧ್ಯಯನ**, ಎಂ.ಫಿಲ್.ನಿಬಂಧ, ೨೦೦೬

೫. ವಿಜಯಲಕ್ಷ್ಮಿ, **ಹಟ್ಟಿ ಚಿನ್ನದ ಗಣಿ : ಚಾರಿತ್ರಿಕ ಹಾಗೂ ಸಮಾಜೋ ಆರ್ಥಿಕ ಅಧ್ಯಯನ**, ಎಂ.ಫಿಲ್. ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೬. ಶರಣಪ್ಪ ವಿ.ಉಮಚಗಿ, **ಹೈದ್ರಾಬಾದ್ ಕರ್ನಾಟಕ ವಿಮೋಚನಾ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಶಿಬಿರಗಳು**, ಎಂ.ಫಿಲ್.ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೭. ಶುಭ, **ಸುರಪುರ : ವಿಮೋಚನಾ ಹೋರಾಟ, ಹೈದ್ರಾಬಾದ್ ಕರ್ನಾಟಕ ವಿಮೋಚನಾ ಹೋರಾಟದ ಹಿನ್ನೆಲೆಯಲ್ಲಿ**, ಎಂ.ಫಿಲ್.ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

**ಕ. ಪತ್ರಿಕೆಗಳು**

೧. ರಾಯಚೂರು ವಾಣಿ( ರಾಯಚೂರಿನ ಸ್ಥಳೀಯ ಪತ್ರಿಕೆ)

೨. ಸುದ್ದಿಮೂಲ(ರಾಯಚೂರಿನ ಸ್ಥಳೀಯ ಪತ್ರಿಕೆ)

೩. ಪ್ರಜಾವಾಣಿ(ದಿನಪತ್ರಿಕೆ)

೪. ವಿಜಯ ಕರ್ನಾಟಕ(ದಿನಪತ್ರಿಕೆ)

೫. ಕನ್ನಡ ಪ್ರಭ(ದಿನಪತ್ರಿಕೆ)

